**ಘಟಕ 19**

# ಸಮಗ್ರ ಶಿಶು ಅಭಿವೃದ್ಧಿ ಯೋಜನೆ (ಐಸಿಡಿಎಸ್) ಒಂದು ದೃಷ್ಟಾಂತ

**ಅಧ್ಯಯನದ ವಿನ್ಯಾಸ**



## 19.1 ಪ್ರಸ್ತಾವನೆ

**ರಘು** ತನ್ನ ಪತ್ನಿ ಮತ್ತು ಮೂವರು ಮಕ್ಕಳೊಡನೆ ಒಂದು ಚಿಕ್ಕ ಹಳ್ಳಿಯಲ್ಲಿ ವಾಸಿಸುತ್ತಿದ್ದಾನೆ. ರಘು ಮತ್ತು ಅವನ ಪತ್ನಿ ಇಬ್ಬರೂ ದಿನಗೂಲಿ ಕೆಲಸಗಾರರು. ರಘು ಗ್ರಾಮದ ಹೊರಗಿರುವ ರಸ್ತೆ ನಿರ್ಮಾಣದ ಯೋಜನೆಯಲ್ಲಿ ಕೆಲಸ ಮಾಡಿದರೆ, ಆತನ ಪತ್ನಿ **ಶಾರದ** ಗ್ರಾಮದ ಮುಖ್ಯಸ್ಥನ ಜಮೀನಿನಲ್ಲಿ ಕೆಲಸ ಮಾಡುತ್ತಾಳೆ. ಈ ದಂಪತಿಗಳ ಮೂರು ಮಕ್ಕಳಲ್ಲಿ ಕಿರಿಯ ಮಗುವಿಗೆ ಮೂರು ತಿಂಗಳು ಅಷ್ಟೇ. ಇನ್ನೂ ಏಳು ವರ್ಷ ತುಂಬಿರದ ಅವರ ಹಿರಿಯ ಮಗಳು ತನ್ನ ನಾಲ್ಕು ವರ್ಷದ ತಮ್ಮ ಮತ್ತು ಕಿರಿಯ ತಂಗಿಯನ್ನು ನೋಡಿಕೊಳ್ಳುತ್ತಾಳೆ. ಒಂದು ದಿನ ಸಂಜೆ ಶಾರದಳು ಬಟ್ಟೆ ಒಗೆಯಲೆಂದು ಗ್ರಾಮದ ನಲ್ಲಿಯ ಬಳಿ ಹೋದಾಗ ಅಲ್ಲಿ ಅವಳಿಗೆ

**ಉತ್ತರಾಬಾಯಿ** ಸಿಕ್ಕಳು. ಉತ್ತರಾಬಾಯಿಯು ಮೂರು ತಿಂಗಳು ಊರಲ್ಲಿರಲಿಲ್ಲ, ಕಳೆದ ತಿಂಗಳಷ್ಟೇ ಅವಳು ಊರಿಗೆ ಹಿಂದಿರುಗಿದ್ದಳು. ಶಾರದಳಿಗೆ ಉತ್ತರಾಬಾಯಿ ಅಷ್ಟು ದಿನ ಎಲ್ಲಿಗೆ ಹೋಗಿದ್ದಳು ಎಂಬುದನ್ನು ತಿಳಿದುಕೊಳ್ಳುವ ತವಕ.

ಉತ್ತರಾ: "ನಾನು ತರಬೇತಿಗೆಂದು ಉನ್ನಾವ್‌ಗೆ ಹೋಗಿದ್ದೆ."
ಶಾರದ: "ತರಬೇತಿಯೇ? ಏನು ತರಬೇತಿ?"
ಉತ್ತರಾ: "ಐಸಿಡಿಎಸ್ ಯೋಜನೆಯಲ್ಲಿ ಒಬ್ಬ ಅಂಗನವಾಡಿ ಕಾರ್ಯಕರ್ತೆಯಾಗಿ ಕೆಲಸ ಮಾಡಲು ನನ್ನನ್ನು ಆಯ್ಕೆ ಮಾಡಿದ್ದಾರೆ ಮತ್ತು ನನ್ನ ಕೆಲಸ ಏನು ಎಂಬುದನ್ನು ಕಲಿಯಲು ಅಲ್ಲಿಗೆ ಹೋಗಬೇಕಿತ್ತು."
ಶಾರದ: "ಅಂಗನವಾಡಿ ಕಾರ್ಯಕರ್ತೆ ಎಂದರೆ?"
ಉತ್ತರಾ: "ನಮ್ಮ ಹಳ್ಳಿಯಲ್ಲಿ ಚಿಕ್ಕ ಮಕ್ಕಳಿಗಾಗಿ ಒಂದು ಸಣ್ಣ ಕೇಂದ್ರವನ್ನು ತೆರೆದಿದ್ದಾರೆ. ಈ ಕೇಂದ್ರವನ್ನು ಅಂಗನವಾಡಿ ಎಂದು ಕರೆಯುತ್ತಾರೆ, ಮತ್ತು ನಾನು ಈ ಕೇಂದ್ರವನ್ನು ನಡೆಸುತ್ತೇನೆ."
ಶಾರದ: "ಆ ಕೇಂದ್ರದಲ್ಲಿ ನೀನು ಏನು ಕೆಲಸ ಮಾಡುತ್ತೀಯೆ?"
ಉತ್ತರಾ: "ಶಾರದಕ್ಕ ನಿನ್ನ ಮಕ್ಕಳು ಎಷ್ಟು ದೊಡ್ಡವರು?"
ಶಾರದ: "ಎಲ್ಲಕ್ಕಿಂತ ಕಿರಿಯವಳಿಗೆ ಮೂರು ತಿಂಗಳಾಯಿತು, ನಾಲ್ಕು ವರ್ಷದ ಒಬ್ಬ ಮಗ ಇದ್ದಾನೆ, ಹಾಗೂ ಹಿರಿಯವಳಿಗೆ ಇನ್ನು ಕೆಲವು ತಿಂಗಳಿಗೆ ಏಳು ವರ್ಷ ತುಂಬುತ್ತದೆ."
ಉತ್ತರಾ: "ಹಾಗಿದ್ದರೆ ನಾಳೆ ಬೆಳಿಗ್ಗೆ ನನ್ನ ಮನೆಗೆ ಬರುತ್ತೀಯಾ? ಕೇಂದ್ರವನ್ನು ಅಲ್ಲೇ ಆರಂಭಿಸಿದ್ದೇವೆ. ನಾವು ಯಾವ ರೀತಿಯ ಕೆಲಸ ಮಾಡುತ್ತೇವೆ ಎಂಬುದನ್ನು ನೀನೇ ಖುದ್ದಾಗಿ ನೋಡಬಹುದಂತೆ. ಜೊತೆಗೆ ನಿನ್ನ ಇಬ್ಬರು ಚಿಕ್ಕ ಮಕ್ಕಳ ಹೆಸರುಗಳನ್ನು ಅಂಗನವಾಡಿಯ ರೆಜಿಸ್ಟರಿನಲ್ಲಿ ದಾಖಲು ಮಾಡುತ್ತೇನೆ."

ಶಾರದಳಿಗೆ ಕುತೂಹಲ, ಮರುದಿನ ಬೆಳಿಗ್ಗೆ ಅಂಗನವಾಡಿ ಕೇಂದ್ರವನ್ನು ಭೇಟಿ ನೀಡಲು ನಿರ್ಧರಿಸುತ್ತಾಳೆ. ಶಾರದಳೊಂದಿಗೆ ನೀವೂ ಭೇಟಿ ನೀಡಲು ಬಯಸುವಿರಾ?

## ಉದ್ದೇಶಗಳು

ಈ ಘಟಕವನ್ನು ಅಭ್ಯಸಿಸಿದ ನಂತರ ನೀವು,

- ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿಯ ಯೋಜನೆಯ ಅವಶ್ಯಕತೆಯನ್ನು ವಿವರಿಸಲು ಶಕ್ಯರಾಗಬೇಕು.
- ಒಂದು ಅಂಗನವಾಡಿ ಕೇಂದ್ರದಲ್ಲಿ ಒದಗಿಸಲಾಗುವ ಸೇವೆಗಳ ಒಂದು ಪಟ್ಟಿಯನ್ನು ಮಾಡಲು ಶಕ್ಯರಾಗಬೇಕು.
- ಒಂದು ಐಸಿಡಿಎಸ್ ಯೋಜನೆಯ ಆಡಳಿತ ಸಂರಚನೆಯನ್ನು ವಿವರಿಸಲು ಶಕ್ಯರಾಗಬೇಕು.

- ಅಂಗನವಾಡಿ ಕಾರ್ಯಕರ್ತೆ, ಮೇಲುಸ್ತುವಾರಿ ಅಧಿಕಾರಿ ಮತ್ತು ಸಿಡಿಪಿಓ ಮಾಡುವ ಕೆಲಸಗಳ ಒಂದು ಪಟ್ಟಿ ತಯಾರಿಸಲು ಶಕ್ಯರಾಗಬೇಕು.
- ಒಂದು ಐಸಿಡಿಎಸ್ ಯೋಜನೆಯಲ್ಲಿನ ವಿವಿಧ ಅಧಿಕಾರಿಗಳ ಪಾತ್ರಗಳನ್ನು ಗುರುತಿಸಲು ಶಕ್ಯರಾಗಬೇಕು.
- ಐಸಿಡಿಎಸ್ ನಂತಹ ಒಂದು ಯೋಜನೆಯಲ್ಲಿ ಸಮುದಾಯದ ಪಾಲ್ಗೊಳ್ಳುವಿಕೆಯ ಮಹತ್ವವನ್ನು ವಿವರಿಸಲು ಶಕ್ಯರಾಗಬೇಕು.
- ಐಸಿಡಿಎಸ್ ಯೋಜನೆಯು ಸರ್ಕಾರದ ಇತರ ಯೋಜನೆಗಳೊಂದಿಗೆ ಹೇಗೆ ಸಂಬಂಧ ಹೊಂದಿದೆ ಎನ್ನುವದನ್ನು ವರ್ಣಿಸಲು ಶಕ್ಯರಾಗಬೇಕು.
- ಐಸಿಡಿಎಸ್ ಯೋಜನೆಯನ್ನು ಅನುಷ್ಠಾನಕ್ಕೆ ತರುವಾಗ ಎದುರಾಗುವ ಸಮಸ್ಯೆಗಳ ಒಂದು ಪಟ್ಟಿ ತಯಾರಿಸಲು ಶಕ್ಯರಾಗಬೇಕು.

## 19.2 ಐಸಿಡಿಎಸ್ ಯೋಜನೆಯ ಫಲಾನುಭವಿಗಳು

ಮಾರನೆಯ ದಿನ...

ಶಾರದಳು ಅಂಗನವಾಡಿಗೆ ಭೇಟಿ ನೀಡುತ್ತಾಳೆ. ಅವಳು ಹೋಗುವ ಹೊತ್ತಿಗಾಗಲೇ ಅಲ್ಲಿ ಕೆಲವು ಮಕ್ಕಳನ್ನು ಸೇರಿಸಲಾಗಿತ್ತು. ಅವರೆಲ್ಲ 3 ರಿಂದ 6 ರ ಒಳಗಿನ ಚಿಕ್ಕ ಮಕ್ಕಳಾಗಿದ್ದರು. ಉತ್ತರಾಬಾಯಿಯ ಬಳಿ ಒಂದು ಹಾಜರಾತಿ ರೆಜಿಸ್ಟರ್ ಇದೆ, ಅದರಲ್ಲಿ ಆಕೆ ಆ ಮಕ್ಕಳ ಹೆಸರುಗಳನ್ನು ಬರೆದಿದ್ದಾಳೆ: ಕೃಷ್ಣ, ಅಬ್ದುಲ್, ಮಾಯಾ, ಡೇವಿಡ್ ಹೀಗೆ. ಅದೇ ಪುಟದಲ್ಲಿ ಉತ್ತರಾಬಾಯಿ ಶಾರದಳ ನಾಲ್ಕು ವರ್ಷದ ಮಗ ಜೀವನ್‌ನ ಹೆಸರನ್ನೂ ಬರೆಯುತ್ತಾಳೆ. ನಂತರ ಹಾಜರಾತಿ ಪುಸ್ತಕದ ಮತ್ತೊಂದು ಪುಟದಲ್ಲಿ ಶಾರದಳ ಹೆಸರನ್ನೂ ಬರೆಯುತ್ತಾಳೆ. ಶಾರದಳಿಗೆ ಅಚ್ಚರಿಯಾಗುತ್ತದೆ. ಉತ್ತರಾ ವಿವರಿಸುತ್ತಾಳೆ:

> "ನಿನ್ನ ಕಿರಿಯ ಮಗಳು ಮೂರು ತಿಂಗಳ ಶಿಶು. ನೀನು ಇನ್ನೂ ಎದೆಹಾಲನ್ನು ಉಣಿಸುತ್ತಿದ್ದೀಯ. ಹೀಗಾಗಿ ನೀನೂ ಸಹ ಅಂಗನವಾಡಿಯ ಫಲಾನುಭವಿಗಳಲ್ಲಿ ಒಬ್ಬಳಾಗುತ್ತೀಯ. ಈ ಅಂಗನವಾಡಿಯನ್ನು ಕಳೆದ ವರ್ಷವೇ ನೀನು ಗರ್ಭಿಣಿಯಾಗಿದ್ದಾಗಲೇ ಆರಂಭಿಸಿದ್ದರೆ, ಆಗ ನಿನ್ನ ಹೆಸರನ್ನು ಗರ್ಭಿಣಿ ತಾಯಿ ಎಂದು ದಾಖಲಿಸಬಹುದಿತ್ತು. ನಿನ್ನ ಹಿರಿಯ ಮಗಳು ಆವಾಗ ಆರು ವರ್ಷಕ್ಕಿಂತ ಚಿಕ್ಕವಳಾಗಿರುತ್ತಿದ್ದಳು, ಆಗ ಶಾಲಾಪೂರ್ವ ಚಟುವಟಿಕೆಗಳ ಸಲುವಾಗಿ ಅವಳೂ ಸಹ ಕೇಂದ್ರಕ್ಕೆ ಬರಬಹುದಿತ್ತು."

ಅಂಗನವಾಡಿಯ ಫಲಾನುಭವಿಗಳು:

- 0-6 ವರ್ಷದೊಳಗಿನ ಮಕ್ಕಳು, ಮತ್ತು
- ಗರ್ಭಿಣಿ ಮತ್ತು ಬಾಣಂತಿಯರು

**ವಿಭಾಗ 19.6 ರಲ್ಲಿ ಐಸಿಡಿಎಸ್ ಯೋಜನೆಯ ಫಲಾನುಭವಿಗಳ ಬಗ್ಗೆ ನೀವು ಮತ್ತಷ್ಟು ತಿಳಿದುಕೊಳ್ಳುವಿರಿ.**

## 19.3 ಅಂಗನವಾಡಿ ಎಂದರೇನು?

ಉತ್ತರಾ ಲಗುಬಗೆಯಿಂದ ಮಕ್ಕಳನ್ನು ಚಿಕ್ಕ ವರ್ತುಲಾಕಾರದಲ್ಲಿ ಸೇರಿಸುತ್ತಾಳೆ, ನಂತರ ಕೈ ಮುಗಿದುಕೊಂಡು ಪ್ರಾರ್ಥನೆಯೊಂದನ್ನು ಹಾಡುತ್ತಾಳೆ. ಆಕೆಯನ್ನು ಅನುಸರಿಸುತ್ತ ಮಕ್ಕಳೂ ಆ ಪ್ರಾರ್ಥನೆಯನ್ನು ಹಾಡುತ್ತಾರೆ. ನಂತರ ಆಕೆಯು ಅವರ ಮುಖ, ಉಗುರುಗಳು, ತಲೆ ಕೂದಲು, ಕಣ್ಣು ಮತ್ತು ಕಿವಿಗಳನ್ನು ನೋಡಿ ಅವು ಸ್ವಚ್ಛವಾಗಿವೆಯೆ ಎಂದು ಪರೀಕ್ಷಿಸುತ್ತಾಳೆ.ಸಹಾಯಕಿಯನ್ನು ಕರೆದು ಅವಶ್ಯಕತೆ ಇದ್ದ ಮಕ್ಕಳನ್ನು ಸ್ವಚ್ಛ ಮಾಡುವಂತೆ ಹೇಳುತ್ತಾಳೆ. ನಂತರ ಉತ್ತರಾ ಮಕ್ಕಳಿಗೆ ಕಥೆಯೊಂದನ್ನು ಹೇಳುತ್ತಾಳೆ. ಮಕ್ಕಳು ಆ ಕಥೆಯನ್ನು ನಾಟಕ ರೂಪದಲ್ಲಿ ಅಭಿನಯಿಸುತ್ತಾರೆ. ಅದಾದ ನಂತರ ಉತ್ತರಾ ಮಕ್ಕಳಿಗೆ ವಿಭಿನ್ನ ಬಣ್ಣಗಳನ್ನು ಗುರುತಿಸುವುದನ್ನು ಕಲಿಸಲು ಎಲೆಗಳು ಮತ್ತು ಹೂವುಗಳನ್ನು ಬಳಸಿಕೊಂಡು ಅವರಿಗೆ ಆಟವೊಂದನ್ನು ಆಡಿಸುತ್ತಾಳೆ. ಕೊನೆಯಲ್ಲಿ ಅವರಿಗೆ ಆಟಿಕೆಗಳನ್ನು ಮಾಡಲು ಆಟದ ಜೇಡಿ ಮಣ್ಣನ್ನು ನೀಡುತ್ತಾಳೆ.

ಈ ಶಾಲಾಪೂರ್ವ ಚಟುವಟಿಕೆಗಳನ್ನು ಮಾಡಿಸಲು ಎರಡು ಗಂಟೆ ಹಿಡಿಯುತ್ತದೆ. ದಿನದ ಕೊನೆಯಲ್ಲಿ ಸಹಾಯಕಿಯು ಮಕ್ಕಳ ಕೈಗಳನ್ನು ತೊಳೆಸುತ್ತಾಳೆ ಮತ್ತು ಉತ್ತರಾ ಅಂಗನವಾಡಿಯಲ್ಲೇ ತಿನ್ನಲು ಮಕ್ಕಳಿಗೆ ಆಹಾರವನ್ನು ಹಂಚುತ್ತಾಳೆ. ನಂತರ ಮಕ್ಕಳೆಲ್ಲ ಮನೆಗೆ ಹೋಗುತ್ತಾರೆ. ಉತ್ತರಾಬಾಯಿಯು ಶಾರದ ಮತ್ತು ಆಕೆಯ ಹಾಗೆ ಅಲ್ಲಿ ಸೇರಿದ್ದ ಇತರ ಕೆಲ ತಾಯಂದಿರಿಗೂ ಆಹಾರ ನೀಡುತ್ತಾಳೆ. ಉತ್ತರಾಬಾಯಿಯ ದಿನ ಅಲ್ಲಿಗೇ ಮುಗಿಯುವುದಿಲ್ಲ. ಆಕೆ ಈ ಕೆಳಗಿನ ವಿವರಗಳನ್ನು ಪ್ರತ್ಯೇಕ ರೆಜಿಸ್ಟರ್‌ಗಳಲ್ಲಿ ತುಂಬಬೇಕು:

- *ಪೂರಕ ಪೌಷ್ಟಿಕ ಆಹಾರ ಸೇವೆಯ ರೆಜಿಸ್ಟರ್‌ನಲ್ಲಿ* ಆಕೆಯು ಹಾಜರಾತಿಯನ್ನು ಮತ್ತು ಆ ದಿನ ಪೂರಕ ಆಹಾರವನ್ನು ಸ್ವೀಕರಿಸಿದ ಮಕ್ಕಳು ಮತ್ತು ತಾಯಂದಿರ ಸಂಖ್ಯೆ ಎಷ್ಟು ಎಂಬುದನ್ನೂ ದಾಖಲಿಸುತ್ತಾಳೆ.
- *ಆಹಾರ ದಾಸ್ತಾನು ರೆಜಿಸ್ಟರ್‌ನಲ್ಲಿ* ಆದಿನ ಅಡುಗೆ ಮಾಡಲು ಬಳಸಿದ ಆಹಾರ ಧಾನ್ಯಗಳ ಪ್ರಮಾಣವನ್ನು ದಾಖಲಿಸುತ್ತಾಳೆ.
- *ನಿತ್ಯದ ದಿನಚರಿ ಪುಸ್ತಕದಲ್ಲಿ* ಆದಿನ ಆಕೆಯು ಮಕ್ಕಳೊಂದಿಗೆ ನಡೆಸಿದ ಚಟುವಟಿಕೆಗಳು ಮತ್ತು ಮಕ್ಕಳು ಮನೆಗೆ ಹೋದ ಮೇಲೆ ಆಕೆ ಮಾಡುವ ಚಟುವಟಿಕೆಗಳ ವಿವರಗಳನ್ನು ದಾಖಲಿಸುತ್ತಾಳೆ.

ಈ ರೆಜಿಸ್ಟರ್‌ಗಳನ್ನು ಪೂರ್ತಿಗೊಳಿಸಿದ ನಂತರ ಆಕೆಯು ಮನೆಗಳಿಗೆ ಭೇಟಿ ನೀಡಲು ಸಿದ್ಧಳಾಗುತ್ತಾಳೆ. ಅವಳ ನಿತ್ಯದ ದಿನಚರಿಯ ಒಂದು ಭಾಗವಾಗಿ

ಸಮುದಾಯದೊಂದಿಗೆ ಸಂಪರ್ಕ ಸಾಧಿಸಲು, ಜಾಗೃತಿ ಮೂಡಿಸಲು, ಸಮಸ್ಯೆಗಳೇನಾದರೂ ಇದ್ದರೆ ಬಗೆಹರಿಸಲು ಮತ್ತು ಅಂಗನವಾಡಿಯ ಚಟುವಟಿಕೆಗಳಲ್ಲಿ ಭಾಗವಹಿಸುವಂತೆ ಉತ್ತೇಜಿಸಲು ಆಕೆಯು ಪ್ರತಿದಿನ ಐದು ಮನೆಗಳನ್ನು ಭೇಟಿ ನೀಡಬೇಕೆಂದು ನಿರೀಕ್ಷಿಸಲಾಗುತ್ತದೆ ಎಂದು ಅವಳ ತರಬೇತಿಯ ಸಮಯದಲ್ಲಿ ಅವಳಿಗೆ ಹೇಳಲಾಗಿತ್ತು. ಉತ್ತರಾ ತನ್ನ ದಾಖಲಾತಿ ಪುಸ್ತಕವನ್ನು ನೋಡುತ್ತಾಳೆ. ನಾಳೆ ಮಕ್ಕಳಿಗೆ ಲಸಿಕೆ ಹಾಕಿಸುವ ದಿನ: ಇನ್ನೂವರೆಗೂ ಲಸಿಕೆ ಹಾಕಿಸಿರದ ಮಕ್ಕಳ ತಾಯಂದಿರನ್ನು ಭೇಟಿ ಮಾಡಿ ಲಸಿಕೆಯ ಮಹತ್ವವನ್ನು ಕುರಿತು ಅವರಿಗೆ ಮನಗಾಣಿಸಬೇಕಿತ್ತು. ಮಹಿಳಾ ಆರೋಗ್ಯ ವೀಕ್ಷಕರೊಂದಿಗೆ (LHV) ಒಬ್ಬ ವೈದ್ಯರೂ ಬರುವುದರಿಂದ ಅವರು ಅಂಗನವಾಡಿಯ ವ್ಯಾಪ್ತಿಗೆ ಸೇರಿದ ಎಲ್ಲಾ ಮಕ್ಕಳು ಮತ್ತು ಗರ್ಭಿಣಿ ತಾಯಂದಿರ ಆರೋಗ್ಯ ತಪಾಸಣೆಯನ್ನೂ ಮಾಡುತ್ತಾರೆ. ಈ ಸಂದರ್ಭ ಅವಕಾಶವನ್ನು ಬಳಸಿ ತನ್ನ ಬಳಿ ಇರುವ ತೂಕದ ಯಂತ್ರದ ಮೂಲಕ ಮಕ್ಕಳ ತೂಕವನ್ನು ಅಳೆದು ಅವರ ಬೆಳವಣಿಗೆಯನ್ನು ದಾಖಲಿಸುವುದಾಗಿ ಯೋಚಿಸುತ್ತಾಳೆ. ಅನಾರೋಗ್ಯದಿಂದ ಇರುವ ಕೆಲ ಮಕ್ಕಳನ್ನು ಆರೋಗ್ಯ ಕೇಂದ್ರಕ್ಕೆ ಒಯ್ದು ತಪಾಸಣೆ ಮಾಡಿಸುವ ಸಲುವಾಗಿ ಅಂದು ಬರುವ ವೈದ್ಯರೊಂದಿಗೆ ಮಾತನಾಡುವ ಬಗೆಗೂ ಯೋಚಿಸಿದಳು.

ಉತ್ತರಾ ಈ ಮೊದಲು ಮನೆಗಳಿಗೆ ಭೇಟಿ ನೀಡಿದ ಸಮಯದಲ್ಲಿ ಅಲ್ಲಿ ಸಿಕ್ಕ ಮಹಿಳೆಯರಿಗೆ ಅಂಗನವಾಡಿಯ ಕೆಲ ಚಟುವಟಿಕೆಗಳಲ್ಲಿ ತನಗೆ ಸಹಾಯ ಮಾಡುವಂತೆ ಕೋರಿದ್ದಳು. ನಾಳೆ ವೈದ್ಯರು ಬಂದಾಗ ಮಕ್ಕಳಿಗೆ ಚಟುವಟಿಕೆಗಳನ್ನು ಆಯೋಜಿಸಲು ಪ್ರಧಾನರ ಮಗಳು ತನಗೆ ನೆರವಾಗುವಳೇ ಎಂದು ತಿಳಿದುಕೊಳ್ಳಲು ಮನೆಗೆ ಹೋಗುವಾಗ ದಾರಿಯಲ್ಲಿ ಪ್ರಧಾನರ ಮನೆಗೆ ಭೇಟಿ ನೀಡಲು ನಿರ್ಧರಿಸಿದಳು.

ಅಂಗನವಾಡಿ ಎಂಬುದು ಒಂದು ಜಾಗ ಅಥವಾ ಒಂದು ಕೇಂದ್ರವಾಗಿದ್ದು, ಅಲ್ಲಿ 6 ಸೇವೆಗಳನ್ನೊಳಗೊಂಡ ಒಂದು ಪ್ಯಾಕೆಜ್ ಅಥವಾ ಸಮುಚ್ಚಯವನ್ನು ಫಲಾನುಭವಿಗಳಿಗೆ ಒದಗಿಸಲಾಗುತ್ತದೆ. ಈ ಸೇವೆಗಳು ಹೀಗಿವೆ:

- ಅನೌಪಚಾರಿಕ ಶಾಲಾಪೂರ್ವ ಶಿಕ್ಷಣ
- ಪೂರಕ ಪೌಷ್ಟಿಕ ಆಹಾರ
- ಆರೋಗ್ಯ ತಪಾಸಣೆ
- ಕುರಿಯರಿಕೆ ಸೇವೆಗಳು (referral services)
- ಪ್ರತಿರಕ್ಷಣೆ ಲಸಿಕೆ
- ಪೌಷ್ಟಿಕತೆ ಮತ್ತು ಆರೋಗ್ಯ ಶಿಕ್ಷಣ

ಶಾರದಳು ಅಂಗನವಾಡಿಯನ್ನು ಭೇಟಿ ಮಾಡಿದ ವಿವರಣೆಯನ್ನು ಮತ್ತೊಮ್ಮೆ ಓದಿ. ಉತ್ತರಾಬಾಯಿಯು ಮೇಲೆ ಹೇಳಿದ ಎಲ್ಲಾ ಆರು ಸೇವೆಗಳನ್ನು ಸಮರ್ಪಕವಾಗಿ ಫಲಾನುಭವಿಗಳಿಗೆ ದೊರಕುವಂತೆ ಮಾಡುತ್ತಿದ್ದಾಳೆಯೆ ಎಂದು ನೋಡಿ.

ಈಗ ಯೋಜನೆಯ ಬಗ್ಗೆ ಇನ್ನೂ ಸ್ವಲ್ಪ ತಿಳಿದುಕೊಳ್ಳೋಣ.

## 19.4 ಐಸಿಡಿಎಸ್ ಯೋಜನೆಯ ಉದ್ದೇಶಗಳು

1974ರಲ್ಲಿ ಭಾರತ ಸರ್ಕಾರವು ರಾಷ್ಟ್ರೀಯ ಮಕ್ಕಳ ನೀತಿಯನ್ನು ರೂಪಿಸಿತು. DECE ಯ 29ನೇ ಘಟಕದಲ್ಲಿ ನಾವು ಈ ದೇಶದ ಮಕ್ಕಳ ಅಭಿವೃದ್ಧಿ ಯೋಜನೆಗಳನ್ನು ಕುರಿತು ಚರ್ಚಿಸುವಾಗ ಅದರ ಬಗ್ಗೆ ಓದಿದ್ದು ನಿಮಗೆ ನೆನಪಿದೆ ಎಂದು ಭಾವಿಸುತ್ತೇನೆ. ಸರ್ಕಾರವು ಆರು ವರ್ಷಕ್ಕಿಂತ ಕೆಳಗಿನ ಮಕ್ಕಳ ಅಭಿವೃದ್ಧಿಗಾಗಿ ಇರುವ ಅತಿ ದೊಡ್ಡ ಯೋಜನೆಯನ್ನು ರೂಪುಗೊಳಿಸಲು ಈ ನೀತಿಯು ಸಹಾಯ ಮಾಡಿದೆ. ಈ ಯೋಜನೆಯನ್ನು ***ಸಮಗ್ರ ಶಿಶು ಅಭಿವೃದ್ಧಿ ಯೋಜನೆ*** ಅಥವಾ ಹೆಚ್ಚು ಜನಪ್ರಿಯವಾಗಿ ***ಐಸಿಡಿಎಸ್*** ಎಂದು ಕರೆಯಲಾಗುತ್ತದೆ.

ಈ ಯೋಜನೆಗೆ ಐದು ಮುಖ್ಯವಾದ ಉದ್ದೇಶಗಳಿವೆ. ಇವುಗಳಲ್ಲಿನ ನಾಲ್ಕನ್ನು ಈ ಹಿಂದಿನ ಘಟಕ 29, ಬ್ಲಾಕ್ 7, DECE-I ರಲ್ಲಿ ವಿವರಿಸಲಾಗಿದೆ. ನಿಮಗೆ ಅವು ಏನೆಂದು ನೆನಪಿವೆಯೆ? ಈ ಕೆಳಗೆ ಖಾಲಿ ಬಿಟ್ಟ ಸ್ಥಳದಲ್ಲಿ ಅವುಗಳನ್ನು ಬರೆಯಿರಿ.

________________________________________________________

________________________________________________________

________________________________________________________

_______________________________________________________

_______________________________________________________

ಹೌದು, ನಿಮಗೆ ಈಗಾಗಲೇ ಗೊತ್ತಿರುವ ಐಸಿಡಿಎಸ್ ಯೋಜನೆಯ ನಾಲ್ಕು ಉದ್ದೇಶಗಳು ಇಂತಿವೆ:

i. 0-6 ವರ್ಷದೊಳಗಿನ ಮಕ್ಕಳ ಪೌಷ್ಟಿಕತೆಯ ಮತ್ತು ಆರೋಗ್ಯದ ಮಟ್ಟವನ್ನು ಸುಧಾರಿಸುವುದು.

ii. ಮಗುವಿನ ಮಾನಸಿಕ, ದೈಹಿಕ ಮತ್ತು ಸಾಮಾಜಿಕ ಬೆಳವಣಿಗೆಗೆ ಬುನಾದಿಯನ್ನು ಹಾಕುವುದು.

iii. ಶಿಶು ಮರಣದ ಪ್ರಮಾಣ, ಕಾಯಿಲೆ ಪ್ರಮಾಣ, ಅಪೌಷ್ಟಿಕತೆ, ಮತ್ತು ಶಾಲೆ ಬಿಡುವ ಪ್ರಮಾಣವನ್ನು ಕಡಮೆ ಮಾಡುವುದು.

iv. ಸರಿಯಾದ ಪೌಷ್ಠಿಕಾಂಶ ಹಾಗೂ ಆರೋಗ್ಯ ಶಿಕ್ಷಣವನ್ನು ನೀಡುವುದರ ಮೂಲಕ ಮಗುವಿನ ಸಾಮಾನ್ಯ ಆರೋಗ್ಯ ಹಾಗೂ ಪೌಷ್ಠಿಕ ಅಗತ್ಯತೆಗಳನ್ನು ಪೂರೈಸುವ ನಿಟ್ಟಿನಲ್ಲಿ ತಾಯಿಯ ಸಾಮರ್ಥ್ಯವನ್ನು ಹೆಚ್ಚಿಸುವುದು.

ಇನ್ನು ಐಸಿಡಿಎಸ್‌ನ ಐದನೆಯ ಗುರಿಯು ಇದಾಗಿದೆ:

- ಮಗುವಿನ ಅಭಿವೃದ್ಧಿಯನ್ನು ಬೆಂಬಲಿಸುವ ಸಲುವಾಗಿ ಇತರೆ ಇಲಾಖೆಗಳೊಂದಿಗೆ ಜೊತೆಗೂಡಿ ಕೆಲಸಮಾಡುವುದು.

ಈ ಉದ್ದೇಶಗಳನ್ನು ಆಧರಿಸಿ ಆರು ಸೇವೆಗಳ ಪ್ಯಾಕೇಜನ್ನು ಮಕ್ಕಳಿಗೆ ಮತ್ತು ಅವರ ತಾಯಂದಿರಿಗೆ ಮತ್ತು ಸಮುದಾಯದ ಇತರ ಮಹಿಳೆಯರಿಗೆ

ಲಭ್ಯವಾಗುವಂತೆ ಮಾಡಲಾಗುತ್ತದೆ. DECE- I, 29ನೇ ಘಟಕದಲ್ಲಿ ನೀವು ಓದಿದಂತೆ ಅಂಗನವಾಡಿಯ ಬೇರೆ ಬೇರೆ ಫಲಾನುಭವಿಗಳಿಗೆ ಬೇರೆ ಬೇರೆ ಸೇವೆಗಳು ಲಭ್ಯವಾಗುತ್ತವೆ. ಅವುಗಳನ್ನು ನೆನಪು ಮಾಡಿಕೊಳ್ಳಲು ಈ ಕೆಳಗಿನ ಅಭ್ಯಾಸ ಚಟುವಟಿಕೆಯು ಸಹಾಯ ಮಾಡುತ್ತದೆ.

**ನಿಮ್ಮ ಪ್ರಗತಿಯನ್ನು ಪರಿಶೀಲಿಸಿಕೊಳ್ಳಿ: ಅಭ್ಯಾಸ ಚಟುವಟಿಕೆ 1**

1. ಕಾಲಮ್ B ಯಲ್ಲಿ ಕೊಟ್ಟಿರುವ ಸೇವೆಗಳನ್ನು ಕಾಲಮ್ A ಯಲ್ಲಿ ಕೊಟ್ಟಿರುವ ಫಲಾನುಭವಿಗಳ ಗುಂಪುಗಳಿಗೆ ಹೊಂದಿಸಿ.

| **ಕಾಲಮ್ A**<br>ಫಲಾನುಭವಿಗಳ ಗುಂಪು | **ಕಾಲಮ್ B**<br>ಸೇವೆಗಳು |
|---|---|
| i. 0-3 ವರ್ಷದೊಳಗಿನ ಮಕ್ಕಳು | a. ಪೌಷ್ಟಿಕತೆ ಮತ್ತು ಆರೋಗ್ಯ ಶಿಕ್ಷಣ |
| ii. 3-6 ರ ಒಳಗಿನ ಮಕ್ಕಳು | b. ಪೂರಕ ಪೌಷ್ಟಿಕ ಆಹಾರ, ಲಸಿಕೆಗಳು, ಆರೋಗ್ಯ ತಪಾಸಣೆ, ಕುರಿಯರಿಕೆ ಸೇವೆಗಳು, ಪೌಷ್ಟಿಕತೆ ಮತ್ತು ಆರೋಗ್ಯ ಶಿಕ್ಷಣ |
| iii. ಗರ್ಭಿಣಿಯರು ಮತ್ತು ಬಾಣಂತಿಯರು | c. ಪೂರಕ ಪೌಷ್ಟಿಕ ಆಹಾರ, ಲಸಿಕೆಗಳು, ಆರೋಗ್ಯ ತಪಾಸಣೆ, ಕುರಿಯರಿಕೆ ಸೇವೆಗಳು |
| iv. 15-45 ರ ಒಳಗಿನ ಮಹಿಳೆಯರು | d. ಪೂರಕ ಪೌಷ್ಟಿಕ ಆಹಾರ, ಲಸಿಕೆಗಳು, ಆರೋಗ್ಯ ತಪಾಸಣೆ, ಕುರಿಯರಿಕೆ ಸೇವೆಗಳು, ಅನೌಪಚಾರಿಕ ಶಾಲಾಪೂರ್ವ ಶಿಕ್ಷಣ |

## 19.5 ಐಸಿಡಿಎಸ್ ಯೋಜನೆಯ ವೈಶಿಷ್ಟ್ಯಗಳು

ಐಸಿಡಿಎಸ್ ಯೋಜನೆಯು ಅನೇಕ ಆಸಕ್ತಿದಾಯಕ ವೈಶಿಷ್ಟ್ಯಗಳನ್ನು ಒಳಗೊಂಡಿದೆ. ಈ ಹಿಂದೆ ಸರ್ಕಾರವು ಕಲ್ಯಾಣ ವಿಸ್ತರಣಾ ಯೋಜನೆಯ ಅಡಿಯಲ್ಲಿ ಮಕ್ಕಳಿಗಾಗಿ

ನಡೆಸುತ್ತಿದ್ದ ಬಾಲವಾಡಿಗಳಂತಹ ಯೋಜನೆಗಳಿಂದ ಪಡೆದ ಅನುಭವದ ಫಲವಿದು. ಸರ್ಕಾರದ ಮುಂಚಿನ ಪ್ರಯತ್ನಗಳ ಬಗ್ಗೆ DECE-I, ೨೯ನೇ ಘಟಕದಲ್ಲಿ ನೀವು ಓದಿದ್ದು ನಿಮಗೆ ನೆನಪಿದೆಯೇ?

ಮಕ್ಕಳಿಗಾಗಿ ಈ ಮೊದಲು ನಡೆಸಿದ ಯೋಜನೆಗಳ ವೈಶಿಷ್ಟ್ಯಗಳಿಗೂ ಮತ್ತು ಐಸಿಡಿಎಸ್ ಯೋಜನೆಯ ವೈಶಿಷ್ಟ್ಯಗಳಿಗೂ ಇರುವ ವ್ಯತ್ಯಾಸಗಳನ್ನು ನೋಡೋಣ.

- ಇದು *ಸಮಗ್ರವಾದದ್ದು*. ಅಂದರೆ ಪರಿಣಾಮಕಾರಿಯಾಗಿರಬೇಕು ಎಂಬ ಉದ್ದೇಶದಿಂದ ಪ್ರತೀ ಮಗುವಿಗೂ ಎಲ್ಲಾ ಆರು ಸೇವೆಗಳನ್ನು ಒಟ್ಟಾಗಿ ನೀಡಲಾಗುತ್ತದೆ. ಉದಾಹರಣೆಗೆ, ಒಂದು ಮಗುವಿನ ಆರೋಗ್ಯವನ್ನು ಸುಧಾರಿಸುವ ದೃಷ್ಟಿಯಿಂದ ಪೂರಕ ಪೌಷ್ಟಿಕ ಆಹಾರವನ್ನು ನೀಡಲಾಗುತ್ತದೆ, ರೋಗಗಳನ್ನು ತಡೆಗಟ್ಟಲು ಲಸಿಕೆಗಳನ್ನು ಹಾಕಲಾಗುತ್ತದೆ, ಗರಿಷ್ಠ ಬೆಳವಣಿಗೆಯ ದೃಷ್ಟಿಯಿಂದ ಮತ್ತು ಶಾಲೆ ಆರಂಭಿಸುವ ಮೊದಲಿನ ಪೂರ್ವಸಿದ್ದತೆಗಾಗಿ ಶಾಲಾಪೂರ್ವ ಚಟುವಟಿಕೆಗಳನ್ನೂ ನೀಡಲಾಗುತ್ತದೆ.
- ಅಂಗನವಾಡಿಗಳು ಮಕ್ಕಳ ಮನೆಗಳ ಸಮೀಪವೇ ಇರುವುದರಿಂದ *ಈ ಸೇವೆಗಳು ಮಕ್ಕಳ ಮನೆಬಾಗಿಲಿಗೇ ತಲುಪಿಸಲಾಗುತ್ತವೆ.*
- *ಮಗುವು ತಾಯಿಯ ಗರ್ಭದಲ್ಲಿ ಬೆಳೆಯುತ್ತಿರುವ ಅವಧಿಯಿಂದಲೇ ಮಗುವಿಗೆ ಸೇವೆಗಳು ಒದಗಿಸಲಾಗುತ್ತವೆ.* ಅಂದರೆ, ಮಹಿಳೆಯೊಬ್ಬಳು ಗರ್ಭಿಣಿ ಎಂದು ಗುರುತಿಸಲಾದ ಕ್ಷಣದಿಂದಲೇ ಪೂರಕ ಆಹಾರ, ಲಸಿಕೆ, ಆರೋಗ್ಯ ತಪಾಸಣೆ ಮತ್ತು ಕುರಿಯರಿಕೆ ಸೇವೆಗಳನ್ನು ಪಡೆಯಲು ಅವಳು ಅಂಗನವಾಡಿಯಲ್ಲಿ ತನ್ನ ಹೆಸರನ್ನು ನೋಂದಣಿ ಮಾಡಿಕೊಳ್ಳಲು ಅರ್ಹಳಾಗುತ್ತಾಳೆ.
- ಮಗು ಹುಟ್ಟಿದ ನಂತರ ಅದರ ಆರೋಗ್ಯ, ಪೌಷ್ಟಿಕತೆ ಮತ್ತು ಶೈಕ್ಷಣಿಕ ಅಗತ್ಯಗಳನ್ನು ನಿಭಾಯಿಸುವ *ಸಾಮರ್ಥ್ಯವನ್ನು* ಇದು *ತಾಯಿಯಲ್ಲಿ ಬೆಳೆಸುತ್ತದೆ.* ಅಂಗನವಾಡಿ ಕಾರ್ಯಕರ್ತೆಯು ತಾಯಂದಿರನ್ನು ಮಾತನಾಡಿಸಿ ಸಮರ್ಪಕ ರೀತಿಯಲ್ಲಿ ಮಕ್ಕಳ ಲಾಲನೆ-ಪಾಲನೆಯ ರೀತಿಗಳ ಬಗ್ಗೆ ಮಾಹಿತಿಯನ್ನು ಸಭೆಗಳಲ್ಲಿ ನೀಡುವುದರ ಮೂಲಕ ಇದು ಸಾಧ್ಯವಾಗುತ್ತದೆ.
- ಇದು *ಸಮುದಾಯಕ್ಕಾಗಿ ಇರುವ ಯೋಜನೆಯಾಗಿದೆ*, ಆದ್ದರಿಂದ ಈ ಸೇವೆಗಳು ಎಲ್ಲರಿಗೂ ದೊರೆಯುವಂತಾಗಲು ಸಮುದಾಯದ ಪಾಲ್ಗೊಳ್ಳುವಿಕೆಯನ್ನು ನಿರೀಕ್ಷಿಸುತ್ತದೆ. ಸಮುದಾಯದ ಜನರು ಅಂಗನವಾಡಿಗೆ ಬರುವಂತೆ, ಅಲ್ಲಿ ಲಭ್ಯವಾಗುವ ಸೇವೆಗಳನ್ನು ಪಡೆಯುವಂತೆ, ಇತರ ಫಲಾನುಭವಿಗಳಿಗೆ ಸೇವೆಗಳನ್ನು ಒದಗಿಸುವ ಕಾರ್ಯದಲ್ಲಿ ಆಕೆಗೆ ನೆರವಾಗುವಂತೆ ಮತ್ತು ಸ್ವ-ಬೆಳವಣಿಗೆಗಾಗಿ ನಿರ್ಧಾರಗಳನ್ನು ಕೈಗೊಳ್ಳಲು ಅಂಗನವಾಡಿಯ ಕಾರ್ಯಕರ್ತೆಯು ಪ್ರೋತ್ಸಾಹಿಸಬೇಕು ಎಂದು ನಿರೀಕ್ಷಿಸಲಾಗುತ್ತದೆ.

- ಈ ಎಲ್ಲ ಸೇವೆಗಳನ್ನು ಒದಗಿಸಲೆಂದು *ಸ್ಥಳೀಯ ಮಹಿಳೆಯೊಬ್ಬರನ್ನು ಅಂಗನವಾಡಿಯ ಕಾರ್ಯಕರ್ತೆಯಾಗಿ* ನೇಮಿಸಲಾಗುತ್ತದೆ. ಈ ಕಾರ್ಯಕರ್ತೆಯು ಆ ಹಳ್ಳಿಯವರೇ ಆಗಿರುತ್ತಾರೆ, ಜನರಿಗೆ ಆಕೆಯು ಪರಿಚಿತಳಾಗಿರುವುದರಿಂದ ಜನ ಆಕೆಯನ್ನು ಒಪ್ಪಿಕೊಳ್ಳುತ್ತಾರೆ. ಸ್ಥಳೀಯರೇ ಆಗಿರುವುದರಿಂದ ಜನರೊಂದಿಗೆ ಮಾತನಾಡಲು ಮತ್ತು ಅವರಿಗೆ ಸಹಾಯ ಮಾಡಲು ಆಕೆ ಯಾವಾಗಲೂ ಲಭ್ಯವಾಗಿರುತ್ತಾಳೆ. ಇದನ್ನೇ ಬೇರೆ ಪದಗಳಲ್ಲಿ ಹೇಳುವುದಾದರೆ, ಅಂಗನವಾಡಿಯಲ್ಲಿ ಒದಗಿಸಲಾಗುವ ಸೇವೆಗಳಿಗೆ ಆಕೆಯು ಕೇಂದ್ರ ಬಿಂದುವಾಗಿ ಕೆಲಸ ಮಾಡುತ್ತಾಳೆ.

## 19.6 ಯೋಜನೆಯ ರಚನೆ ಮತ್ತು ವಿಸ್ತರಣೆ

- ಒಂದು ಐಸಿಡಿಎಸ್ ಯೋಜನೆಯ ಅಡಿಯಲ್ಲಿ ಒಟ್ಟೂ 100 ಅಂಗನವಾಡಿ ಕೇಂದ್ರಗಳು ಇರುತ್ತವೆ.
- ಒಟ್ಟು ಸುಮಾರು 1000 ಜನಸಂಖ್ಯೆಯಿರುವ ಒಂದು ಹಳ್ಳಿಯಲ್ಲಿ ಅಥವಾ ಹಳ್ಳಿಗಳ ಗುಂಪಿಗೆ ಒಂದು ಅಂಗನವಾಡಿ ಕೇಂದ್ರವನ್ನು ಸ್ಥಾಪಿಸಲಾಗುತ್ತದೆ.

ಕೊಟ್ಟಿರುವ ಈ ಮಾಹಿತಿಯನ್ನು ನೋಡಿ ಐಸಿಡಿಎಸ್ ಯೋಜನೆಯ ವ್ಯಾಪ್ತಿಯ ಬಗೆಗೆ ನೀವು ಏನು ಹೇಳಬಹುದು? ಹೌದು, ಒಂದು ಐಸಿಡಿಎಸ್ ಯೋಜನೆಯು ಸುಮಾರು 1 ಲಕ್ಷ ಜನರನ್ನು, ಅಂದರೆ ಒಂದು ಆಡಳಿತದ ವಿಭಾಗವನ್ನು (ಬ್ಲಾಕ್) ಒಳಗೊಳ್ಳುತ್ತದೆ. ಬ್ಲಾಕ್ ಎಂದರೇನು? ಭಾರತದಲ್ಲಿ ನಿಮಗೆ ಗೊತ್ತಿರುವ ಹಾಗೆ ನಿರ್ವಹಣೆಯ ದೃಷ್ಟಿಯಿಂದ ಸುಮಾರು 5000 ಬ್ಲಾಕ್‌ಗಳಿವೆ. ಪ್ರತೀ ಬ್ಲಾಕ್‌ಗೂ ಸುಮಾರು 1 ಲಕ್ಷ ಜನರಿರುತ್ತಾರೆ.




**ಚಿತ್ರ 19.1 ಒಂದು ಐಸಿಡಿಎಸ್ ಯೋಜನೆ**

ಒಂದು ಐಸಿಡಿಎಸ್ ಯೋಜನೆ: 100 ಅಂಗನವಾಡಿ ಕೇಂದ್ರಗಳು

ಒಂದು ಅಂಗನವಾಡಿ ಕೇಂದ್ರ: 1000 ಜನಕ್ಕೆ ಸೇವೆಗಳನ್ನು ಒದಗಿಸುತ್ತದೆ

ಪ್ರತೀ ಐಸಿಡಿಎಸ್ ಯೋಜನೆಯಲ್ಲಿ ಈ ಕೆಳಗಿನ ಸಿಬ್ಬಂದಿಗಳಿರುತ್ತಾರೆ:

- ಎಲ್ಲಾ 100 ಅಂಗನವಾಡಿ ಕೇಂದ್ರಗಳನ್ನು ನೋಡಿಕೊಳ್ಳುವ ಒಬ್ಬ ***ಮಕ್ಕಳ ಅಭಿವೃದ್ಧಿ ಯೋಜನೆಯ ಅಧಿಕಾರಿ (ಸಿಡಿಪಿಒ)*** ಇರುತ್ತಾರೆ.
- ಸಿಡಿಪಿಒ ಕೆಳಗೆ ಪ್ರತೀ 20-25 ಅಂಗನವಾಡಿ ಕೇಂದ್ರಗಳಿಗೆ ಒಬ್ಬರಂತೆ 4 ರಿಂದ 5 ***ಮೇಲುಸ್ತುವಾರಿ ಅಧಿಕಾರಿಗಳು*** ಇರುತ್ತಾರೆ.
- 100 ***ಅಂಗನವಾಡಿ ಕಾರ್ಯಕರ್ತರು*** ಇರುತ್ತಾರೆ; ಪ್ರತೀ ಅಂಗನವಾಡಿ ಕೇಂದ್ರಕ್ಕೆ ಒಬ್ಬರಂತೆ.
- 100 ***ಸಹಾಯಕರು*** ಇರುತ್ತಾರೆ; ಪ್ರತೀ ಅಂಗನವಾಡಿ ಕೇಂದ್ರಕ್ಕೆ ಒಬ್ಬರಂತೆ.

**ಎಲ್ಲಾ ಐಸಿಡಿಎಸ್ ಯೋಜನೆಗಳನ್ನು ಹೇಗೆ ಒಂದಕ್ಕೊಂದು ಸಂಬಂಧ ಹೊಂದುವಂತೆ ಮಾಡಲಾಗುತ್ತದೆ?**

ಒಂದು ಜಿಲ್ಲೆಯಲ್ಲಿ ಅದರ ಗಾತ್ರ ಮತ್ತು ಜನಸಂಖ್ಯೆಗೆ ಅನುಗುಣವಾಗಿ ಒಂದು ಅಥವಾ ಹಲವು ಐಸಿಡಿಎಸ್ ಯೋಜನೆಗಳು ಇರಬಹುದು. ಎಲ್ಲಾ ಐಸಿಡಿಎಸ್ ಯೋಜನೆಗಳ ಸಿಡಿಪಿಒ ಗಳು ಒಬ್ಬ ***ಜಿಲ್ಲಾ ಯೋಜನಾಧಿಕಾರಿಗೆ*** (DPO) ವರದಿ ಒಪ್ಪಿಸಬೇಕು.

ರಾಜ್ಯದ ಎಲ್ಲಾ ಜಿಲ್ಲೆಗಳ DPO ಗಳು ರಾಜ್ಯದ *ಐಸಿಡಿಎಸ್ ಅಂಗಸಂಸ್ಥೆಗೆ* ವರದಿ ಒಪ್ಪಿಸುತ್ತಾರೆ. ಈ ಅಂಗಸಂಸ್ಥೆಯನ್ನು ಕಲ್ಯಾಣ ಸಚಿವಾಲಯ ಅಥವಾ ಆರೋಗ್ಯ ಸಚಿವಾಲಯದಲ್ಲಿ ನೆಲೆಗೊಂಡಿರಬಹುದು. ಕೆಲವೊಮ್ಮೆ ಬೇರೆ ಬೇರೆ ರಾಜ್ಯಗಳಲ್ಲಿ ಈ ಸಚಿವಾಲಯಗಳಿಗೆ ಬೇರೆ ಬೇರೆ ಹೆಸರುಗಳಿರುತ್ತವೆ. ರಾಜ್ಯ ಸಚಿವಾಲಯಗಳಲ್ಲಿರುವ ಎಲ್ಲಾ ಐಸಿಡಿಎಸ್ ಅಂಗಸಂಸ್ಥೆಗಳು ಕೇಂದ್ರದ *ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ* ಸಂಬಂಧ ಹೊಂದಿರುತ್ತದೆ.

ಚಿತ್ರ 19.2ರಲ್ಲಿ ನೀಡಿದ ನಕ್ಷೆಯನ್ನು ನೋಡಿ. ಅದು ಐಸಿಡಿಎಸ್ ಯೋಜನೆಯ ಆಡಳಿತ ಸಂರಚನೆಯನ್ನು ತೋರಿಸುತ್ತದೆ.

**ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯ, ಭಾರತ ಸರ್ಕಾರ**

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ (ಸಚಿವಾಲಯದ ಒಂದು ಭಾಗ)**

**ವಿವಿಧ ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳಲ್ಲಿರುವ ಐಸಿಡಿಎಸ್ ಅಂಗಸಂಸ್ಥೆಗಳು**

**ಜಿಲ್ಲಾ ಯೋಜನಾಧಿಕಾರಿ (DPO)ಗಳು**

**ಸಿಡಿಪಿಒ ಗಳು**

**ಮೇಲುಸ್ತುವಾರಿ ಅಧಿಕಾರಿಗಳು**

**ಅಂಗನವಾಡಿ ಕಾರ್ಯಕರ್ತೆಯರು**

**ಚಿತ್ರ 19.2 ಐಸಿಡಿಎಸ್ ಯೋಜನೆಯ ಆಡಳಿತ ಸಂರಚನೆ**

## ಯೋಜನೆಯ ವಿಸ್ತರಣೆ

ಮೊದಲಿಗೆ ಪ್ರಯೋಗಾರ್ಥವಾಗಿ ಕೇವಲ 33 ಐಸಿಡಿಎಸ್ ಯೋಜನೆಗಳನ್ನು ಆರಂಭಿಸಲಾಯಿತು. ಇವು ದೇಶದ 33 ಬೇರೆ ಬೇರೆ ಆಡಳಿತದ ಬ್ಲಾಕ್‌ಗಳಲ್ಲಿದ್ದವು. ಮೊದಲ 33 ಐಸಿಡಿಎಸ್ ಯೋಜನೆಗಳು ಯಶಸ್ವಿಯಾದ ನಂತರ ಸರ್ಕಾರವು ಈ ಯೋಜನೆಯನ್ನು ವಿಸ್ತರಿಸುವ ಯೋಚನೆ ಮಾಡಿತು. ಕೇಂದ್ರದ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಪ್ರಕಾರ ಇವತ್ತು ದೇಶದ ಬೇರೆ ಬೇರೆ ಕಡೆಯಲ್ಲಿ 3,000ಕ್ಕಿಂತ ಹೆಚ್ಚು ಐಸಿಡಿಎಸ್ ಯೋಜನೆಗಳಿವೆ. ಈ ಯೋಜನೆಗಳು ಮುಖ್ಯವಾಗಿ ಗ್ರಾಮೀಣ ಮತ್ತು ಬುಡಕಟ್ಟು ಪ್ರದೇಶಗಳಲ್ಲಿ ನೆಲೆಗೊಂಡಿವೆ. ನಗರ ಕೊಳೆಗೇರಿ ಪ್ರದೇಶಗಳಲ್ಲಿಯೂ ಈ ಯೋಜನೆಗಳು ಇವೆಯಾದರೂ ಅವು ಬಹಳ ಕಡಮೆ ಇವೆ.

ಐಸಿಡಿಎಸ್ ಯೋಜನೆಗಳನ್ನು ಹಿಂದುಳಿದ ಮತ್ತು ಬಡ ಪ್ರದೇಶಗಳಲ್ಲಿ ಹಮ್ಮಿಕೊಳ್ಳಲಾಗುತ್ತದೆ, ಅದು ಒದಗಿಸುವ ಸೇವೆಗಳು ಈ ಕೆಳಗಿನ ಮಕ್ಕಳನ್ನು ತಲುಪುತ್ತದೆ:

- ಭೂರಹಿತ ಕುಟುಂಬಗಳು
- 500 ರುಪಾಯಿಗಳಿಗಿಂತಲೂ ಕಡಮೆ ಆದಾಯವಿರುವ ಕುಟುಂಬಗಳು
- ಲಾಭದಾಯಕ ಜಮೀನು ಹೊಂದಿರದ ರೈತರು, ಅಂದರೆ ಅತೀ ಸಣ್ಣ ಭೂ ತುಂಡುಗಳನ್ನು ಹೊಂದಿರುವವರು
- ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು

ವಿಭಾಗ 19.2 ರಲ್ಲಿ ನೀವು ಕಲಿತದ್ದು ಮತ್ತು ಈಗ ಓದಿರುವುದು ಎರಡನ್ನೂ ಪರಿಗಣಿಸಿ ಐಸಿಡಿಎಸ್ ಯೋಜನೆಯ ಫಲಾನುಭವಿಗಳು ಯಾರು ಎಂಬುದನ್ನು ಹೇಳಬಲ್ಲಿರಾ?

| |
|---|
| ಮುಖ್ಯವಾಗಿ ಗ್ರಾಮೀಣ ಮತ್ತು ಬುಡಕಟ್ಟು ಪ್ರದೇಶಗಳು ಹಾಗೂ ನಗರದ ಕೊಳೆಗೇರಿಗಳಲ್ಲಿರುವ ಹಿಂದುಳಿದ/ಬಡ ಕುಟುಂಬಗಳಿಗೆ ಸೇರಿದ ಮಕ್ಕಳು ಮತ್ತು ಮಹಿಳೆಯರು ಐಸಿಡಿಎಸ್ ಯೋಜನೆಯ ಫಲಾನುಭವಿಗಳಾಗಿರುತ್ತಾರೆ. |

## 19.7 ಯೋಜನೆಯ ಆರಂಭ

ಯೋಜನಾ ಕ್ಷೇತ್ರ, ಸಿಡಿಪಿಒ ಮತ್ತು ಮೇಲುಸ್ತುವಾರಿ ಅಧಿಕಾರಿಗಳನ್ನು ಆರಿಸಿಕೊಳ್ಳುವುದರೊಂದಿಗೆ ಈ ಯೋಜನೆಯು ಆರಂಭವಾಗುತ್ತದೆ. ಸರ್ಕಾರವು ಪರಿಶಿಷ್ಟ ಜಾತಿ ಮತ್ತು ಹಿಂದುಳಿದ ಬುಡಕಟ್ಟಿನ ಜನಸಂಖ್ಯೆ ಎಲ್ಲಿ ಹೆಚ್ಚು ದಟ್ಟವಾಗಿದೆಯೋ ಅದಕ್ಕೆ ಅನುಗುಣವಾಗಿ ಯೋಜನಾ ಕ್ಷೇತ್ರವನ್ನು ಆರಿಸಿಕೊಳ್ಳಲಾಗುತ್ತದೆ.

**ಸಿಡಿಪಿಒ ಮತ್ತು ಮೇಲುಸ್ತುವಾರಿ ಅಧಿಕಾರಿಗಳ ಕಾರ್ಯಗಳು**

ಆಯ್ಕೆಗೊಂಡ ಸಿಡಿಪಿಒ ಮತ್ತು ಮೇಲುಸ್ತುವಾರಿ ಅಧಿಕಾರಿಗಳನ್ನು ತರಬೇತಿಗೆ ಕಳುಹಿಸಲಾಗುತ್ತದೆ. ಅವರು ತರಬೇತಿಯಿಂದ ತಮ್ಮ ಯೋಜನಾಕ್ಷೇತ್ರಕ್ಕೆ ಮರಳಿದ ನಂತರ ತಮ್ಮ ಯೋಜನೆಯನ್ನು ಆರಂಭಿಸಲು ಈ ಕೆಳಗಿನ ಹೆಜ್ಜೆಗಳನ್ನು ಅನುಸರಿಸುತ್ತಾರೆ.

- **ಗ್ರಾಮದ ಮುಖ್ಯಸ್ಥರು ಮತ್ತು ಇತರ ಮುಖ್ಯ ವ್ಯಕ್ತಿಗಳನ್ನು ಸಂಪರ್ಕಿಸುವುದು**
  ಸಿಡಿಪಿಒ ಮತ್ತು ಮೇಲುಸ್ತುವಾರಿ ಅಧಿಕಾರಿಗಳು ಯೋಜನಾ ಕ್ಷೇತ್ರದ ನಕ್ಷೆಯೊಂದನ್ನು ತಯಾರಿಸಿ ಆ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಸರ್ಪಂಚರು, ಪಂಚಾಯತ್ ಸದಸ್ಯರು ಮತ್ತು ಹಳ್ಳಿಯ ಇತರ ಮುಖ್ಯ ವ್ಯಕ್ತಿಗಳನ್ನು ಒಟ್ಟುಗೂಡಿಸಿ ಅವರೊಂದಿಗೆ ಚರ್ಚಿಸಲು ಸಭೆಗಳನ್ನು ಸೇರಿಸುತ್ತಾರೆ. ಅವರೆಲ್ಲರಿಗೂ ಯೋಜನೆಯ ಕಾರ್ಯೋದ್ದೇಶಗಳ ಬಗ್ಗೆ ವಿವರಿಸಿ ಈ ಕೆಳಗಿನ ಪ್ರಯೋಜನಗಳನ್ನು ಚರ್ಚಿಸುತ್ತಾರೆ:
  i. ಐಸಿಡಿಎಸ್ ಯೋಜನೆಯು ಗ್ರಾಮದಲ್ಲಿರುವ ಶಿಶುಗಳು ಮತ್ತು ತಾಯಂದಿರ ಮರಣ ಪ್ರಮಾಣವನ್ನು ಇಳಿಸುತ್ತದೆ.
  ii. ತಾಯಂದಿರಿಗೆ ಪೂರಕ ಆಹಾರವನ್ನು ಒದಗಿಸುವ ಮೂಲಕ ಮತ್ತು ಅವರು ಗರ್ಭವತಿಯಾಗಿದ್ದಾಗ ಅವರ ಆರೈಕೆ ಮಾಡುವ ಮೂಲಕ ಐಸಿಡಿಎಸ್ ಯೋಜನೆಯು ಆರೋಗ್ಯವಂತ ಶಿಶುಗಳು ಜನಿಸುವಂತೆ ನೋಡಿಕೊಳ್ಳುತ್ತದೆ.
  iii. ರೋಗ ನಿರೋಧಕ ಪ್ರತಿರಕ್ಷಣೆ ಲಸಿಕೆಗಳನ್ನು ಹಾಕುವ ಮೂಲಕ ಮಕ್ಕಳು ಅನಾರೋಗ್ಯದಿಂದ ಬಳಲದಂತೆ ಮತ್ತು ಅವರು ಅಂಗವಿಕಲರಾಗದಂತೆ ಐಸಿಡಿಎಸ್ ಯೋಜನೆಯು ನೋಡಿಕೊಳ್ಳುತ್ತದೆ.
  iv. ಮಕ್ಕಳಿಗೆ ಪೂರಕ ಪೌಷ್ಟಿಕ ಆಹಾರವನ್ನು ನೀಡಿ ಅವರ ಬೆಳವಣಿಗೆಯ ಮೇಲೆ ನಿಗಾ ಇಡುವ ಮೂಲಕ ಮಕ್ಕಳು ಅಪೌಷ್ಟಿಕತೆಯಿಂದ ಬಳಲದಂತೆ ಐಸಿಡಿಎಸ್ ನೋಡಿಕೊಳ್ಳುತ್ತದೆ.
  v. ಐಸಿಡಿಎಸ್ ಮಕ್ಕಳ ಸಮಗ್ರ ಬೆಳವಣಿಗೆಯನ್ನು ಉತ್ತೇಜಿಸುತ್ತದೆ ಮತ್ತು ಅವರನ್ನು ಔಪಚಾರಿಕ ಶಾಲಾಶಿಕ್ಷಣಕ್ಕಾಗಿ ತಯಾರು ಮಾಡುತ್ತದೆ.

- **ಸಮುದಾಯ ಸಭೆಗಳನ್ನು ಆಯೋಜಿಸುವುದು**
  ಗ್ರಾಮದ ಮುಖಂಡರುಗಳ ಸಹಾಯದೊಂದಿಗೆ ಸಿಡಿಪಿಒ ಮತ್ತು ಮೇಲುಸ್ತುವಾರಿ ಅಧಿಕಾರಿಗಳು ಎಲ್ಲಾ ಗ್ರಾಮಗಳಲ್ಲಿಯೂ ಸಮುದಾಯ

ಸಭೆಗಳನ್ನು ಆಯೋಜಿಸುತ್ತಾರೆ. ಗ್ರಾಮಸ್ಥರಿಗೆ ಐಸಿಡಿಎಸ್ ಬಗ್ಗೆ, ಅಲ್ಲಿ ಒದಗಿಸಲಾಗುವ ಸೇವೆಗಳು ಮತ್ತು ಅದರ ಪ್ರಯೋಜನಗಳ ಬಗ್ಗೆ ಹೇಳುವುದು, ಮತ್ತು ಅಂಗನವಾಡಿಯ ಚಟುವಟಿಕೆಗಳಿಗೆ ಅವರೆಲ್ಲರ ಸಹಾಯ ಮತ್ತು ಪಾಲ್ಗೊಳ್ಳುವಿಕೆಯನ್ನು ಕೋರುವುದು ಅದರ ಉದ್ದೇಶವಾಗಿರುತ್ತದೆ.

- **ಅಂಗನವಾಡಿ ಕಾರ್ಯಕರ್ತರು ಮತ್ತು ಸಹಾಯಕರ ಆಯ್ಕೆ**

  ಆ ಸಭೆಗಳಲ್ಲಿ ಗ್ರಾಮದ ಸಮುದಾಯವು ಗ್ರಾಮದ ಕೆಲ ಮಹಿಳೆಯರ ಹೆಸರುಗಳನ್ನು ಸೂಚಿಸುವ ಮೂಲಕ ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿಯನ್ನು ಆಯ್ಕೆ ಮಾಡಲು ಸಿಡಿಪಿಒ ಗೆ ಸಹಾಯ ಮಾಡುತ್ತದೆ. ಕಾರ್ಯಕರ್ತೆಯಾಗಿ ಆಯ್ಕೆಯಾದ ವ್ಯಕ್ತಿಯು,

  - ಗ್ರಾಮದವರೇ ಆಗಿರಬೇಕು, ಮತ್ತು
  - ಕನಿಷ್ಠ 8 ನೇ ತರಗತಿ ವಿದ್ಯಾರ್ಹತೆಯನ್ನು ಹೊಂದಿರಬೇಕು. ಶಿಕ್ಷಿತ ಮಹಿಳೆಯರು ಸಿಗುವುದು ಕಷ್ಟವಾಗುವ ಕೇಂದ್ರದ ಸ್ಥಳಗಳಲ್ಲಿ 8 ರವರೆಗೆ ಓದದೇ ಇರುವ ಅಥವಾ ಅಶಿಕ್ಷಿತ ಮಹಿಳೆಯರನ್ನೂ ಆರಿಸಬಹುದು.

  ಕಾರ್ಯಕರ್ತರನ್ನು ಆರಿಸುವಾಗ ಆಕೆಗೆ ಮಕ್ಕಳೊಂದಿಗೆ ಕೆಲಸ ಮಾಡಲು ಖುಷಿ ಇದೆಯೆ, ಕರ್ತವ್ಯಗಳನ್ನು ನಿರ್ವಹಿಸುವ ಸಹಜ ಸಾಮರ್ಥ್ಯವಿದೆಯೆ, ಮತ್ತು ಸಮುದಾಯದೊಂದಿಗೆ ಒಳ್ಳೆಯ ಸಂಬಂಧವಿದೆಯೆ ಎಂಬುದನ್ನೆಲ್ಲ ತಿಳಿದುಕೊಳ್ಳಬೇಕಾಗುತ್ತದೆ.

  ಸಹಾಯಕರು ಕೆಲಸದ ಅಗತ್ಯವಿರುವ ಸಮುದಾಯದ ಯಾವುದೇ ಮಹಿಳೆಯಾಗಿರಬಹುದು, ಉದಾಹರಣೆಗೆ ವಿಧವೆ ಅಥವಾ ಪತಿಯಿಂದ ಪರಿತ್ಯಕ್ತರಾದವರು, ಅಥವಾ ಯಾವುದೇ ಹಿರಿಯ ಮಹಿಳೆ ಆಗಿರಬಹುದು.

- **ಅಂಗನವಾಡಿ ಕಾರ್ಯಕರ್ತರು ಮತ್ತು ಸಹಾಯಕರಿಗೆ ತರಬೇತಿ**

  ಅಂಗನವಾಡಿ ಕಾರ್ಯಕರ್ತರನ್ನು ಮೂರು ತಿಂಗಳ ತರಬೇತಿಗಾಗಿ ಅಂಗನವಾಡಿ ಕಾರ್ಯಕರ್ತರ ತರಬೇತಿ ಕೇಂದ್ರಗಳಿಗೆ (AWTCs) ಕಳುಹಿಸಲಾಗುತ್ತದೆ. ಸಹಾಯಕರ ತರಬೇತಿಯ ಅವಧಿ 10 ದಿನಗಳಿರುತ್ತವೆ.

  ಅನುಗತವಾಗಿ,ಅವರು ಎರಡು ವರ್ಷ ಕೆಲಸ ಮಾಡಿದ ನಂತರ ಕಾರ್ಯಕರ್ತರು ಮತ್ತು ಸಹಾಯಕರಿಗೆ ಒಂದು ಅಲ್ಪಾವಧಿಯ ಮರುನೋಟದ ಕೋರ್ಸ್ (refresher course) ಕೂಡಾ ಇರುತ್ತದೆ. ಅದು ಕಾರ್ಯಕರ್ತರಿಗೆ 2 ವಾರ ಮತ್ತು ಸಹಾಯಕರಿಗೆ 1 ವಾರವಿರುತ್ತದೆ.

## ಅಂಗನವಾಡಿ ಕಾರ್ಯಕರ್ತೆಯ ಕಾರ್ಯಗಳು

ತರಬೇತಿ ಮುಗಿಸಿ ಬಂದ ನಂತರ ಒಬ್ಬ ಅಂಗನವಾಡಿ ಕಾರ್ಯಕರ್ತೆಯು ಮಾಡಬೇಕಾದ ಕೆಲಸಗಳು ಏನೇನು ಎಂಬುದನ್ನು ನೋಡೋಣ.

- **ಅಂಗನವಾಡಿ ಕೇಂದ್ರಗಳ ಆಯ್ಕೆ**

ತರಬೇತಿ ಮುಗಿಸಿ ಬಂದ ನಂತರ ಅಂಗನವಾಡಿ ಕಾರ್ಯಕರ್ತೆಯು ಕೇಂದ್ರವನ್ನು ಆರಂಭಿಸಲು ಸೂಕ್ತವಾದ ಜಾಗವೊಂದನ್ನು ಆರಿಸಬೇಕು. ಅದನ್ನು ಮಾಡುವಾಗ ಆಕೆಯು ಗಮನದಲ್ಲಿ ಇಟ್ಟುಕೊಳ್ಳಬೇಕಾದ ಎಲ್ಲ ಅಂಶಗಳನ್ನು ಪಟ್ಟಿ ಮಾಡುವಿರಾ?

ಘಟಕ 31, (DECE-1) ನೋಡಿ, ನಿಮಗೆ ಎಲ್ಲ ಅಂಶಗಳೂ ನೆನಪಿವೆಯೆ ಎಂದು ಪರಿಶೀಲಿಸಿಕೊಳ್ಳಿ.

ಅಂಗನವಾಡಿ ಕೇಂದ್ರವೊಂದನ್ನು ಆರಿಸುವಾಗ ಅಂಗನವಾಡಿ ಕಾರ್ಯಕರ್ತೆಯು ಈ ಕೆಳಗಿನ ಅಂಶಗಳನ್ನು ಸಹ ಗಮನದಲ್ಲಿಡಬೇಕು:

- ಫಲಾನುಭವಿ ಕುಟುಂಬಗಳ ಮನೆಗಳಿಗೆ ಹತ್ತಿರದಲ್ಲಿರಬೇಕು
- ಮಕ್ಕಳು ಸುಲಭವಾಗಿ ಬಂದು ಹೋಗುವಂತೆ ಗ್ರಾಮದ ಕೇಂದ್ರಭಾಗದಲ್ಲಿರಬೇಕು.

ಕೇಂದ್ರವು ಮಕ್ಕಳ ಮನೆಗಳಿಂದ ಬಹಳ ದೂರವಿದ್ದರೆ ಕೇಂದ್ರಕ್ಕೆ ಪ್ರತಿನಿತ್ಯ ಬೆಳಿಗ್ಗೆ ನಡೆದುಕೊಂಡು ಬರಲು ಅವರಿಗೆ ಕಷ್ಟವಾಗುತ್ತದೆ.

- **ಅಂಗನವಾಡಿ ಕೇಂದ್ರವನ್ನು ಸಿದ್ಧಗೊಳಿಸುವುದು**

ಕೇಂದ್ರಕ್ಕೆ ಸೂಕ್ತವಾದ ಜಾಗವನ್ನು ಆರಿಸಿಕೊಂಡ ಮೇಲೆ ಅಂಗನವಾಡಿ ಕಾರ್ಯಕರ್ತೆಯು ಅಂಗನವಾಡಿಯನ್ನು ಸಜ್ಜುಗೊಳಿಸಬೇಕು. ತರಬೇತಿಯ ಸಮಯದಲ್ಲಿ ಆಕೆ ಮಾಡಿದ ವಿವಿಧ ಕಲಿಕಾ ಸಾಧನಗಳನ್ನು ಪ್ರದರ್ಶನಕ್ಕೆಂದು ಇಡುತ್ತಾಳೆ ಮತ್ತು ಕೇಂದ್ರವು ಆಕರ್ಷಕವಾಗಿ ಕಾಣಲೆಂದು ನಕ್ಷೆಗಳನ್ನು, ಪೋಸ್ಟರ್‌ಗಳನ್ನು ಸಹ ಪ್ರದರ್ಶಿಸಿ ಆಕೆ ಸಜ್ಜುಗೊಳಿಸುತ್ತಾಳೆ. ಅಂಗನವಾಡಿ ಕೇಂದ್ರಕ್ಕೆ ಬೇಕಾಗುವ ಸಾಮಗ್ರಿಗಳು ಮತ್ತು ಸಾಮಾನು ಸರಂಜಾಮುಗಳನ್ನು ಪಡೆಯಲು ಆಕೆಯು ತನ್ನ ವಲಯದ ಮೇಲುಸ್ತುವಾರಿ ಅಧಿಕಾರಿಯನ್ನು ಹಾಗೂ ಸಿಡಿಪಿಓ ರವರನ್ನು ಸಂಪರ್ಕಿಸುತ್ತಾಳೆ. ಅವಳಿಗೆ ಈ ಕೆಳಗಿನ ಸಾಮಗ್ರಿಗಳನ್ನು ಒದಗಿಸಲಾಗುತ್ತದೆ:

- ಆಹಾರ ಸಾಮಗ್ರಿಗಳನ್ನು ಸಂಗ್ರಹಿಸಿ ಇಡಲು ಬೇಕಾಗುವ ಡಬ್ಬಗಳು
- ಪೂರಕ ಆಹಾರಗಳನ್ನು ತಯಾರಿಸಲು ಮತ್ತು ಅಡುಗೆ ಮಾಡಲು ಪಾತ್ರೆಗಳು ಮತ್ತು ಅಡುಕಲಗಳು
- ಮಕ್ಕಳಿಗೆ ಪೂರಕ ಪೌಷ್ಠಿಕಾಂಶ ಆಹಾರವನ್ನು ಬಡಿಸಲು ತಟ್ಟೆಗಳು ಮತ್ತು ಬಟ್ಟಲುಗಳು
- ತೂಕದ ಯಂತ್ರ ಮತ್ತು ಬೆಳವಣಿಗೆಯನ್ನು ನಮೂದಿಸುವ ರೆಜಿಸ್ಟರ್‌ಗಳು
- ಮಕ್ಕಳು ಕುಳಿತುಕೊಳ್ಳಲು ಚಾಪೆಗಳು
- ಶಾಲಾಪೂರ್ವದ ಚಟುವಟಿಕೆಗಳಿಗಾಗಿ ಆಟದ ಸಾಮಾನುಗಳು
- ವಿವರಗಳನ್ನು ದಾಖಲಿಸುವ ರೆಜಿಸ್ಟರ್‌ಗಳು
- ಆರೋಗ್ಯ ಮತ್ತು ಸ್ವಚ್ಛತೆಯ ಕೆಲಸಗಳಿಗಾಗಿ ಬಕೆಟ್, ಸಾಬೂನು, ಉಗುರು ಕತ್ತರಿಸುವ ಕ್ಲಿಪ್ ಇತ್ಯಾದಿ
- ಸಾಮಗ್ರಿಗಳನ್ನು ಇಡಲು ಬಾಕ್ಸ್

- **ಸಮೀಕ್ಷೆಯನ್ನು ನಡೆಸುವುದು**

  ಅಂಗನವಾಡಿ ಕಾರ್ಯಕರ್ತೆಯು ಅಂಗನವಾಡಿ ಕೇಂದ್ರವನ್ನು ಹೇಗೆ ಸಜ್ಜುಗೊಳಿಸಬಹುದು ಎಂದು ಯೋಚಿಸುತ್ತಿರುವಾಗಲೇ ಇಡೀ ಹಳ್ಳಿಯ ಸಮೀಕ್ಷೆಯನ್ನೂ ಆರಂಭಿಸಬೇಕು. ಒಂದು ಪ್ರತ್ಯೇಕ ಸಮೀಕ್ಷಾ ನಮೂನೆಯಲ್ಲಿ ಪ್ರತೀ ಕುಟುಂಬದ ಬಗ್ಗೆ ಮಾಹಿತಿಯನ್ನು ಆಕೆ ಗುರುತುಮಾಡಿಕೊಳ್ಳಬೇಕು ಮತ್ತು ಎಲ್ಲಾ ಮಾಹಿತಿಯನ್ನು ಒಂದು ಸಮೀಕ್ಷಾ ರೆಜಿಸ್ಟರ್‌ನಲ್ಲಿ ಸಂಗ್ರಹಿಸಿ ಇಡಬೇಕು.

  ಅಂಗನವಾಡಿ ಕಾರ್ಯಕರ್ತೆಯಾದ ತಾರಾದೇವಿ ಸಮೀಕ್ಷೆಯನ್ನು ಹೇಗೆ ಮಾಡುತ್ತಾರೆ ಎಂದು ನೋಡೋಣ.

  ತಾರಾಳ ಹಳ್ಳಿಯಲ್ಲಿ ಒಟ್ಟೂ 85 ಕುಟುಂಬಗಳಿವೆ. ತನ್ನ ಸಮೀಕ್ಷೆಯನ್ನು ಆಕೆ ತನಗೆ ಗೊತ್ತಿದ್ದ ಕುಟುಂಬಗಳೊಂದಿಗೆ ಆರಂಭಿಸಲು ನಿರ್ಧರಿಸುತ್ತಾಳೆ. ಮೊದಲಿಗೆ ತನ್ನ ಪಕ್ಕದ ಮನೆಯನ್ನೇ ಆರಿಸಿಕೊಳ್ಳುತ್ತಾಳೆ. ತರಕಾರಿ ಕತ್ತರಿಸುತ್ತ ಕುಳಿತಿರುವ ಪಕ್ಕದ ಮನೆಯ ಅಜ್ಜಿಯನ್ನು ಅಭಿವಂದಿಸುತ್ತಾಳೆ.

  ತಾರಾ: "ನಮಸ್ಕಾರ ಅಜ್ಜೀ. ಹೇಗಿದ್ದೀರಿ?"

  ಅಜ್ಜಿ: "ನಮಸ್ಕಾರ ತಾರಾ. ನಾನು ಚೆನ್ನಾಗಿದ್ದೇನೆ. ನೀನು ಹೇಗಿದ್ದೀ? ಇವತ್ತೇನು ನಮ್ಮ ಮನೆಗೆ ಬಂದೆ?"

  ತಾರಾ: (ಅಜ್ಜಿಯ ಪಕ್ಕದಲ್ಲೇ ಕುಳಿತು ಅಜ್ಜಿಗೆ ತರಕಾರಿಗಳನ್ನು ಕತ್ತರಿಸಲು ಸಹಾಯ ಮಾಡಲೆಂದು ಅವುಗಳನ್ನು ಬೇರ್ಪಡಿಸುತ್ತಾಳೆ) "ಅಜ್ಜೀ, ನಾನು ಈ ಗ್ರಾಮದ ಸಮೀಕ್ಷೆ ಮಾಡಬೇಕಿದೆ. ಈ ಗ್ರಾಮದಲ್ಲಿ ವಾಸ ಮಾಡುತ್ತಿರುವ ಒಟ್ಟೂ ಜನರು ಎಷ್ಟಿದ್ದಾರೆ, ಆರು ವರ್ಷದ ಒಳಗಿನ ಮಕ್ಕಳು ಎಷ್ಟಿದ್ದಾರೆ, ಕಳೆದ ಒಂದು ವರ್ಷದಲ್ಲಿ ಹುಟ್ಟಿದ ಮಕ್ಕಳು ಎಷ್ಟಿದ್ದಾರೆ, ವಿಕಲಚೇತನ ಮಕ್ಕಳು ಎಷ್ಟಿದ್ದಾರೆ ಎನ್ನುವುದನ್ನೆಲ್ಲ ನಾನು ಕಂಡುಕೊಳ್ಳಬೇಕಿದೆ."

  ಅಜ್ಜಿ: "ಆದರೆ, ಯಾಕೆ? ಅದು ನಿನಗೆ ಹೇಗೆ ಸಹಾಯ ಮಾಡುತ್ತದೆ?"

  ತಾರಾ: "ಅಜ್ಜೀ, ಅಂಗನವಾಡಿಗೆ ಸೇರಿಸಬೇಕಾದ ಎಲ್ಲಾ ಮಕ್ಕಳು ಮತ್ತು ಯಾರು ಯಾರಿಗೆ ಅದರ ಸೇವೆಗಳು ಸಿಗಬೇಕೋ ಅವರೆಲ್ಲರ ಒಂದು ಪಟ್ಟಿಯನ್ನು ನಾನು ತಯಾರಿಸಬೇಕು. ಅದರ ಜೊತೆಗೆ ನಮ್ಮ ಗ್ರಾಮದಲ್ಲಿರುವ ಮಕ್ಕಳು ಮತ್ತು ಮಹಿಳೆಯರ ಆರೋಗ್ಯ ಸ್ಥಿತಿಗಳ ಬಗೆಗೂ ಗುರುತು ಮಾಡಿಕೊಳ್ಳಬೇಕು. ನಾಲ್ಕು ತಿಂಗಳ ನಂತರ ಈ ಮಾಹಿತಿಯನ್ನು ನವೀಕರಿಸಿದಾಗ ಈ ಮಕ್ಕಳು ಮತ್ತು ಮಹಿಳೆಯರ ಆರೋಗ್ಯ ಸ್ಥಿತಿಯಲ್ಲಿ ಏನಾದರೂ ಬದಲಾವಣೆ ಆಗಿದೆಯೇ ಎಂದು ನನಗೆ ಗುರುತಿಸಲು ಸಾಧ್ಯವಾಗುತ್ತದೆ. ಅಂದರೆ ನಾವು ನೀಡಿದ ಸೇವೆಗಳು ಅವರಿಗೆ ಸಹಾಯವಾಯಿತೇ ಎಂದು ಗೊತ್ತಾಗುತ್ತದೆ.

ಗ್ರಾಮದಲ್ಲಿ ಸಮೀಕ್ಷೆಯನ್ನು ನಡೆಸುವಾಗ ತಾರಾ ಗ್ರಾಮಸ್ಥರಿಗೆ ಐಸಿಡಿಎಸ್ ಯೋಜನೆಯ ಬಗ್ಗೆ ಮಾಹಿತಿ ನೀಡಿದಳು. ಅವರ ಪ್ರಶ್ನೆಗಳಿಗೆ ಉತ್ತರಿಸಿ ಅವರ ಸಂದೇಹಗಳನ್ನು ಬಗೆಹರಿಸಿದಳು.

ತಾರಾ 4-5 ದಿನಗಳಲ್ಲಿ ತನ್ನ ಸಮೀಕ್ಷಾ ನಮೂನೆಯ ಸಾರಾಂಶವನ್ನು ತಯಾರಿಸಿದಳು. ಒಟ್ಟೂ ಇರುವ ಕುಟುಂಬಗಳ ಸಂಖ್ಯೆಯನ್ನು ಲೆಕ್ಕ ಹಾಕಿದಳು. ಈಗ ಗ್ರಾಮದಲ್ಲಿ ಇರುವ ಒಟ್ಟೂ ಜನಸಂಖ್ಯೆ, ಒಟ್ಟೂ ಮಹಿಳೆಯರು ಮತ್ತು ಮಕ್ಕಳ ಸಂಖ್ಯೆ ಆಕೆಗೆ ಗೊತ್ತಾಯಿತು. ಸಮೀಕ್ಷೆಯ ದತ್ತಾಂಶಗಳಿಂದ ಆ ಗ್ರಾಮದ ಅನೇಕ ಶಿಶುಗಳು ಹುಟ್ಟಿದ ಕೂಡಲೇ ತೀರಿಕೊಂಡಿವೆ ಎಂಬುದು ತಾರಾಗೆ ಗೊತ್ತಾಯಿತು. ಅವಳಿಗೆ ಆ ಕುರಿತು ಕಳವಳವಾಯಿತು. ಮುಂದಿನ ಸಲ ಮೇಲುಸ್ತುವಾರಿ ಅಧಿಕಾರಿಯನ್ನು ಭೇಟಿ ಮಾಡಿದಾಗ ಇದನ್ನು ಅವರಿಗೆ ಹೇಳಬೇಕು ಮತ್ತು ಇದರ ಸಲುವಾಗಿ ನಾವು ಏನು ಮಾಡಬಹುದು ಎಂದು ಕೇಳಬೇಕು ಎಂದುಕೊಂಡಳು. ಮೇಲುಸ್ತುವಾರಿ ಅಧಿಕಾರಿ ಹೀಗೆ ಹೇಳಿದರು.

ಮೇಲುಸ್ತುವಾರಿ ಅಧಿಕಾರಿ: "ಗ್ರಾಮದಲ್ಲಿನ ಮಕ್ಕಳು, ಮಹಿಳೆಯರು ಮತ್ತು ಗ್ರಾಮಸ್ಥರ ಆರೋಗ್ಯ ಸ್ಥಿತಿ ಹೇಗಿದೆ ಎನ್ನುವುದನ್ನು ತಿಳಿದುಕೊಳ್ಳಲು ಸಮೀಕ್ಷೆಯು ನೆರವಾಗುತ್ತದೆ. ಸಮೀಕ್ಷೆಯಿಂದ ಸಿಕ್ಕ ಮಾಹಿತಿಯನ್ನು ಆಧರಿಸಿ ಅವರ ಸ್ಥಿತಿ ಸುಧಾರಿಸಲು ನಾವು ಏನು ಮಾಡಬಹುದು ಎಂಬುದನ್ನು ನಾವು ನಿರ್ಧರಿಸಬಹುದು. ನಿನ್ನ ಪ್ರಕರಣದಲ್ಲಿ, ನಾವು ಶಿಶುಗಳ ಮರಣ ಪ್ರಮಾಣವನ್ನು ಕಡಮೆ ಮಾಡುವುದರ ಕಡೆಗೆ ನಮ್ಮೆಲ್ಲ ಪ್ರಯತ್ನಗಳನ್ನು ಹಾಕಬೇಕು. ಅದಕ್ಕಾಗಿ ಮಹಿಳೆ ಗರ್ಭಿಣಿ ಎಂದು ಗೊತ್ತಾದ ಕೂಡಲೇ ನಾವು ಅವರ ಹೆಸರನ್ನು ದಾಖಲಿಸಿಕೊಳ್ಳಬೇಕು, ನಂತರ ಅವರು ನಿಯಮಿತವಾಗಿ ಆರೋಗ್ಯ ಕಾರ್ಯಕರ್ತರಿಂದ ಪ್ರಸವ ಪೂರ್ವ ಆರೋಗ್ಯ ತಪಾಸಣೆ ಮಾಡಿಸಿಕೊಳ್ಳುವಂತೆ ನೋಡಿಕೊಳ್ಳಬೇಕು ಮತ್ತು ನಂತರ ಅವರ ಹೆರಿಗೆಯು ಒಬ್ಬ ತರಬೇತಿ ಪಡೆದ ಪ್ರಸೂತಿ ಸಕಾಯಕರು/ಆರೋಗ್ಯ ಕಾರ್ಯಕರ್ತರಿಂದ ಅಥವಾ ಆರೋಗ್ಯ ಕೇಂದ್ರಗಳಲ್ಲಿ ನಡೆಯುವಂತೆ ನೋಡಿಕೊಳ್ಳಬೇಕು. ಒಂದು ವರ್ಷದ ಈ ಪ್ರಯತ್ನಗಳ ನಂತರ ಪುನಃ ಸಮೀಕ್ಷೆಗಳನ್ನು ಮಾಡಿ ಮಾಹಿತಿಗಳನ್ನು ನವೀಕರಿಸಿ ಮರಣದ ಪ್ರಮಾಣ ಕಡಮೆಯಾಗಿದೆಯೆ ಎಂದು ನೋಡೋಣ. ಹೀಗೆ ಒಂದು ಸಮೀಕ್ಷೆಯು ನಮ್ಮ ಗುರಿಗಳನ್ನು ನಿರ್ಧರಿಸಿಕೊಳ್ಳಲು ಸಹಾಯ ಮಾಡುತ್ತದೆ."

ತಾರಾ ತನ್ನ ಮೇಲುಸ್ತುವಾರಿ ಅಧಿಕಾರಿಯೊಂದಿಗೆ ಯಾವ ಕಾರ್ಯವನ್ನು ಯೋಜಿಸಿದಳು ಎನ್ನುವುದನ್ನು ಮುಂದಿನ ವಿಭಾಗದಲ್ಲಿ ತಿಳಿದುಕೊಳ್ಳುತ್ತೇವೆ.

ಒಂದು ಹೊಸ ಯೋಜನೆಯನ್ನು ಆರಂಭಿಸುವ ಮೊದಲು ಈ ಕೆಳಗಿನ ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳುವುದು ಮುಖ್ಯ:

**ಅಂಗನವಾಡಿ ಕೇಂದ್ರವನ್ನು ಆರಂಭಿಸುವಾಗ ಅದರ ಉದ್ಘಾಟನೆಗೆ ಊರಿನ ಪ್ರಧಾನರನ್ನು ಆಹ್ವಾನಿಸುವುದು ಮತ್ತು ಆ ಸಮಾರಂಭಕ್ಕೆ**

**ಗ್ರಾಮಸ್ಥರೆಲ್ಲರನ್ನೂ ಆಹ್ವಾನಿಸುವುದು ಒಳ್ಳೆಯದು.** ಈ ರೀತಿಯಲ್ಲಿ ಪ್ರತಿಯೊಬ್ಬರೂ ಅಂಗನವಾಡಿಯಲ್ಲಿ ಲಭ್ಯವಾಗುವ ಸೇವೆಗಳ ಬಗ್ಗೆ ತಿಳಿದುಕೊಳ್ಳುತ್ತಾರೆ. ತಾಯಂದಿರಿಗೆ ಅಂಗನವಾಡಿ ಕೇಂದ್ರವನ್ನು ತೆರೆಯಲಾಗುವ ಸಮಯದ ಬಗ್ಗೆ ತಿಳಿಸಬಹುದು.

**ಕೇಂದ್ರವನ್ನು ಶುರು ಮಾಡುವಾಗ ಕಾರ್ಯಕರ್ತೆಯು ಆ ಗ್ರಾಮದ ಜನರ ಅಗತ್ಯಗಳಿಗೆ ತಕ್ಕಂತೆ ಸಾಧ್ಯವಾಗುವ ಬದಲಾವಣೆಗಳನ್ನು ಅಳವಡಿಸಿಕೊಳ್ಳಲು ಕಾಳಜಿ ವಹಿಸಬೇಕು.** ಉದಾಹರಣೆಗೆ, ತಾಯಂದಿರಿಗೆ ಅಂಗನವಾಡಿಯ ಸಮಯವು ಹೊಂದದೇ ಇರಬಹುದು. ಹಳ್ಳಿಗಳಲ್ಲಿ ಹೆಚ್ಚಿನ ಮಹಿಳೆಯರು ಜಮೀನುಗಳಲ್ಲಿ ಕೆಲಸ ಮಾಡಲೆಂದು ಮುಂಜಾನೆಯೇ ಹೊರಡುತ್ತಾರೆ, ಆಗ ಮನೆಯಲ್ಲಿ ಮಕ್ಕಳನ್ನು ನೋಡಿಕೊಳ್ಳಲು ಯಾರೂ ಇರುವುದಿಲ್ಲವೆಂದು ಅವರನ್ನೂ ತಮ್ಮ ಜೊತೆಯಲ್ಲಿ ಕರೆದೊಯ್ಯುತ್ತಾರೆ. ಅಂತಹ ಪ್ರಸಂಗಗಳಲ್ಲಿ ಕೆಲಸಕ್ಕೆ ಹೋಗುವಾಗ ದಾರಿಯಲ್ಲಿ ತಾಯಂದಿರು ತಮ್ಮ ಮಕ್ಕಳನ್ನು ಅಂಗನವಾಡಿಯಲ್ಲಿ ಬಿಟ್ಟು ಹೋಗಲು ಅನುಕೂಲವಾಗಲೆಂದು ಅಂಗನವಾಡಿ ಕಾರ್ಯಕರ್ತೆಯು ಮೇಲುಸ್ತುವಾರಿ ಅಧಿಕಾರಿಯ ಜೊತೆ ಚರ್ಚಿಸಿ ಕೇಂದ್ರವನ್ನು ಬೆಳಿಗ್ಗೆ ೯.೦೦ ಗಂಟೆಗೆ ತೆರೆಯುವ ಬದಲು 7.30ಕ್ಕೆ ತೆರೆಯಬಹುದು.

**ನಿಮ್ಮ ಪ್ರಗತಿಯನ್ನು ಪರಿಶೀಲಿಸಿಕೊಳ್ಳಿ: ಅಭ್ಯಾಸ ಚಟುವಟಿಕೆ 2**

1. ತಪ್ಪಾದ ಉತ್ತರಗಳಿಗೆ ಕಾಟು (X) ಹೊಡೆಯಿರಿ.

ಒಂದು ಸಮೀಕ್ಷೆಯು-------ಸಹಾಯ ಮಾಡುತ್ತದೆ.

i. ಸಮುದಾಯದೊಂದಿಗೆ ಸಂಬಂಧ ಸ್ಥಾಪಿಸಲು
ii. ಸಮುದಾಯಕ್ಕೆ ಐಸಿಡಿಎಸ್ ಯೋಜನೆಯ ಬಗ್ಗೆ ಮಾಹಿತಿ ನೀಡಲು
iii. ಅಂಗನವಾಡಿ ಕೇಂದ್ರಕ್ಕೆ ಜಾಗವೊಂದನ್ನು ಗುರುತಿಸಲು
iv. ಸಮುದಾಯದಲ್ಲಿನ ಮಕ್ಕಳ ಆರೋಗ್ಯ ಸ್ಥಿತಿಯನ್ನು ಕಂಡುಕೊಳ್ಳಲು
v. ಅಂಗನವಾಡಿಯಲ್ಲಿ ಯಾವ ಪೂರಕ ಪೌಷ್ಟಿಕ ಆಹಾರವನ್ನು ನೀಡುವುದೆಂಬುದನ್ನು ನಿರ್ಧರಿಸಲು
vi. ಸೇವೆಗಳನ್ನು ನೀಡಲು ಫಲಾನುಭವಿಗಳನ್ನು ಗುರುತಿಸಲು
vii. ಸಾಧಿಸಬೇಕಾದ ಗುರಿಗಳನ್ನು ಯೋಜಿಸಲು
viii. ಸಮಸ್ಯೆಗಳಿಗೆ ಯಾವ ಪರಿಹಾರ ಕ್ರಿಯೆ ಆಗಬೇಕೆಂಬುದನ್ನು ಯೋಜಿಸಲು

## 19.8 ಸಿಡಿಪಿಓ (ಮಕ್ಕಳ ಅಭಿವೃದ್ಧಿ ಯೋಜನಾಧಿಕಾರಿ) ಗಳಿಂದ ಯೋಜನೆಯ ರೂಪಣೆ

ಅಂಗನವಾಡಿಯಲ್ಲಿ ಅಂಗನವಾಡಿ ಕಾರ್ಯಕರ್ತೆಯು ನೀಡಬೇಕಾದ ವಿವಿಧ ಸೇವೆಗಳು ಯಾವವು ಮತ್ತು ಅವುಗಳನ್ನು ಏಕೆ ನೀಡಬೇಕು ಎಂದು ನಿಮಗೆ ನೆನಪಿದೆಯೆ? ಆ ಸೇವೆಗಳು ಪರಿಣಾಮಕಾರಿಯಾಗಿ ಜನರನ್ನು ತಲುಪಲು ಸಿಡಿಪಿಓ ಏನೆಲ್ಲಾ ಯೋಜಿಸಬೇಕು ಎನ್ನುವುದನ್ನು ನೋಡೋಣ. ಅದನ್ನು ಕಂಡುಕೊಳ್ಳಲು

ನಾವು ಧರಂಪುರದ ಐಸಿಡಿಎಸ್ ಯೋಜನಯ ಸಿಡಿಪಿಒ ಆಗಿರುವ ವಿಜಯಾರವರ ಕಛೇರಿಗೆ ಹೋಗೋಣ.

ವಿಜಯಾರವರು ಮುಂದಿನ ವಾರ ಎಲ್ಲಾ ಅಂಗನವಾಡಿ ಕಾರ್ಯಕರ್ತೆಯರು ತರಬೇತಿ ಮುಗಿಸಿಕೊಂಡು ಬರುವರು ಎಂಬ ನಿರೀಕ್ಷೆಯಲ್ಲಿದ್ದರು. ಅಂಗನವಾಡಿಗಳಲ್ಲಿ ಸೇವೆಗಳನ್ನು ಒದಗಿಸುವುದನ್ನು ಆರಂಭಿಸಲು ಯಾವ ಯಾವ ಕೆಲಸಗಳು ಆಗಬೇಕು ಎಂಬುದನ್ನು ಚರ್ಚಿಸಲು ಅವರು ಮೇಲುಸ್ತುವಾರಿ ಅಧಿಕಾರಿಗಳನ್ನು ಕಛೇರಿಗೆ ಬರಹೇಳಿದ್ದರು. ವಿಜಯಾರವರು ತಯಾರಿಸಿದ ಪಟ್ಟಿ ಇಂತಿದೆ:

- ಶಾಲಾಪೂರ್ವ ಮಕ್ಕಳಿಗಾಗಿ ಅಂಗನವಾಡಿ ಕಾರ್ಯಕರ್ತೆಯರು ಬಳಸಬೇಕಾದ ಶಾಲಾಪೂರ್ವ ದಿನಚರಿಯೊಂದನ್ನು ಯೋಜಿಸುವುದು.
- ಮಕ್ಕಳಿಗೆ ಸಮರ್ಪಕ ಪೂರಕ ಪೌಷ್ಟಿಕ ಆಹಾರವು ಸಿಗುವಂತಾಗಲು ವಾರದಲ್ಲಿ ಪ್ರತಿದಿನ ಬೇರೆ ಬೇರೆ ಪದಾರ್ಥಗಳನ್ನು ಮಾಡಲು ಆರು ಆಹಾರ ಪದಾರ್ಥಗಳನ್ನು ಯೋಜಿಸುವುದು.
- ಮಕ್ಕಳನ್ನು ತೂಕ ಮಾಡುವ ದಿನಗಳು/ದಿನಾಂಕಗಳನ್ನು ನಿಗದಿ ಪಡಿಸುವುದು.
- ಪೌಷ್ಟಿಕತೆ ಮತ್ತು ಆರೋಗ್ಯ ಶಿಕ್ಷಣದ ನಿಮಿತ್ತ ನಿತ್ಯವೂ ಭೇಟಿ ನೀಡಬೇಕಾದ ಮನೆಗಳು ಎಷ್ಟು, ಆಯೋಜಿಸಬೇಕಾದ ತಾಯಂದಿರ ಸಭೆಗಳು ಎಷ್ಟಿರಬೇಕು ಹಾಗೂ ತಿಂಗಳಿಗೆ ಎಷ್ಟು ಸಮುದಾಯ ಸಭೆಗಳು ಇರಬೇಕು ಇತ್ಯಾದಿಗಳನ್ನು ಯೋಜಿಸುವುದು.
- ಆರೋಗ್ಯ ತಪಾಸಣೆ ಮತ್ತು ಲಸಿಕೆ ಹಾಕುವ ದಿನಗಳಿಗೆ ಸಂಬಂಧಿಸಿದಂತೆ ಆರೋಗ್ಯಾಧಿಕಾರಿಗಳನ್ನು ಭೇಟಿ ಮಾಡುವುದು.
- ಅಂಗನವಾಡಿ ಕೇಂದ್ರಗಳಿಗೆ ಎಲ್ಲಾ ಅಗತ್ಯ ಸಾಮಾನು ಸರಂಜಾಮುಗಳನ್ನು ಸರಬರಾಜು ಮಾಡುವುದು.
- ಅಂಗನವಾಡಿ ಕಾಯಕರ್ತೆಯರು ತಮ್ಮ ಮೇಲುಸ್ತುವಾರಿ ಅಧಿಕಾರಿಗಳೊಂದಿಗೆ ಮತ್ತು ತಮ್ಮೊಂದಿಗೆ ನಡೆಸಬೇಕಾದ ಸಭೆಗಳ ದಿನಾಂಕಗಳನ್ನು ನಿಗದಿ ಪಡಿಸುವುದು.
- ಗ್ರಾಮದಲ್ಲಿ ಮಹಿಳಾ ಮಂಡಲ್ ಗಳನ್ನು ಶುರು ಮಾಡಲು ಯೋಜನೆ ಹಾಕುವುದು.
- ಅಂಗನವಾಡಿ ಕಾರ್ಯಕರ್ತೆಯರು ನಿತ್ಯವೂ ತುಂಬಬೇಕಾದ ದಾಖಲಾತಿ ಪುಸ್ತಕಗಳನ್ನು ಯೋಜಿಸುವುದು.
- ಸಾಧಿಸಬೇಕಾದ ಗುರಿಗಳನ್ನು ಯೋಜಿಸುವುದು ಮತ್ತು ಅದನ್ನು ಅಂಗನವಾಡಿ ಕಾರ್ಯಕರ್ತೆಯರಿಗೆ ತಿಳಿಸುವುದು.

ಆ ದಿನ ನಡೆದ ಸಭೆಯಲ್ಲಿ ಮೇಲ್ಕಾಣಿಸಿದ ಈ ಸಂಗತಿಗಳನ್ನು ಕುರಿತು ಯಾವ ನಿರ್ಧಾರಗಳನ್ನು/ ಕಾರ್ಯನಿರ್ಣಯಗಳನ್ನು ಕೈಗೊಳ್ಳಲಾಯಿತು ಎಂಬುದನ್ನು ನೋಡೋಣ.

- **ಶಾಲಾಪೂರ್ವ ಶಿಕ್ಷಣದ ದಿನಚರಿಯನ್ನು ಯೋಜಿಸುವುದು.**

ಅಂಗನವಾಡಿ ಕಾರ್ಯಕರ್ತೆಯರು ಶಾಲಾಪೂರ್ವ ಮಕ್ಕಳೊಂದಿಗೆ ಆಟದ ಚಟುವಟಿಕೆಗಳನ್ನು ಸಂಯೋಜಿಸಲು ಅನುಕೂಲವಾಗುವಂತೆ ವಾರದ ದಿನಚರಿಯನ್ನು ವಿಜಯಾ ಮತ್ತು ಮೇಲುಸ್ತುವಾರಿ ಅಧಿಕಾರಿಗಳು ತಯಾರಿಸಿದರು. ದಿನಚರಿಯನ್ನು ಯೋಜಿಸುವಾಗ ಆಟಗಳಿಗೆ ಲಭ್ಯವಾಗುವ ಜಾಗ ಮತ್ತು ಪರಿಕರಗಳನ್ನು ಪರಿಗಣಿಸಲಾಯಿತು. ಆ ಚಟುವಟಿಕೆಗಳ ಜೊತೆಗೆ ಚಟುವಟಿಕೆಗಳಿಗೆ ಅಗತ್ಯವಿರುವ  ಕಥೆಪುಸ್ತಕಗಳು, ಫ್ಲಾನೆಲ್ ಬೋರ್ಡ್, ಹಾಳೆ ಮತ್ತು ಆಟದ ಜೇಡಿಮಣ್ಣಿನಂತಹ ಸಹಾಯಕ ಸಾಧನಗಳನ್ನೂ/ಪರಿಕರಗಳನ್ನೂ ಅಲ್ಲಿ ಸೂಚಿಸಲಾಯಿತು.

ಚಟುವಟಿಕೆಗಳನ್ನು ಹೇಗೆ ನಡೆಸಬೇಕು ಎಂಬುದನ್ನು ಕುರಿತು ತಾನು ಕಾರ್ಯಕರ್ತೆಯರೊಂದಿಗೆ ಮಾತನಾಡಬೇಕು, ಜೊತೆಗೆ ದಿನಚರಿಯನ್ನು ಹೇಗೆ ಅನುಸರಿಸಬೇಕು ಎಂಬುದನ್ನು ಹೇಳಬೇಕು ಎಂದು ವಿಜಯಾ ನಿರ್ಧರಿಸಿದರು. ಪ್ರತೀ ಮೂರು ತಿಂಗಳಿಗೊಮ್ಮೆ ಒಂದು ಹೊಸ ದಿನಚರಿಯನ್ನು ತಯಾರಿಸಲು ಅವರು ನಿರ್ಧರಿಸಿದರು.

ವಿಜಯಾರವರು ಪ್ರತಿ 3-4 ತಿಂಗಳಿಗೊಮ್ಮೆ ಹೊಸ ದಿನಚರಿಯನ್ನು ಏಕೆ ಮಾಡಬೇಕು ಎಂದು ನೀವು ಹೇಳುವಿರಾ?

- **ಪೂರಕ ಪೌಷ್ಟಿಕ ಆಹಾರವನ್ನು ಒದಗಿಸಲು ಆಹಾರ ಪದಾರ್ಥಗಳ ಪಟ್ಟಿಯನ್ನು ಯೋಜಿಸುವುದು.**

ಅಂಗನವಾಡಿಯ ಮಕ್ಕಳಿಗೆ ಸಮರ್ಪಕ ಪೌಷ್ಟಿಕ ಆಹಾರ ಸಿಗುವಂತಾಗಲು ಆರು ಪೂರಕ ಆಹಾರ ಪದಾರ್ಥಗಳನ್ನು ವಿಜಯಾ ಮತ್ತು  ಮೇಲುಸ್ತುವಾರಿ ಅಧಿಕಾರಿಗಳು ನಿರ್ಧರಿಸಿದರು. ಐಸಿಡಿಎಸ್ ಯೋಜನೆಯಲ್ಲಿ ಪೂರಕ ಪೌಷ್ಟಿಕ ಆಹಾರಕ್ಕೆ ಸಂಬಂಧಿಸಿದ ಮೂರು ಪ್ರಕಾರದ ದಿನಸಿ ಹಂಚಿಕೆ ಇದೆ ಎಂಬುದನ್ನು ವಿಜಯಾ ಜ್ಞಾಪಿಸಿಕೊಂಡರು.

i. ಕೇರ್ (CARE–Cooperative for Assistance and Relief Everywhere (ಎಲ್ಲೆಡೆ ಸಹಾಯ ಮತ್ತು ಪರಿಹಾರಕ್ಕಾಗಿ ಸಹಕಾರಿ ಸಂಸ್ಥೆ) ಮತ್ತು ಡಬ್ಲ್ಯುಎಫ್‌ಪಿ (WFP-World Food Programme (ವಿಶ್ವ ಆಹಾರ ಯೋಜನೆ)) - ಈ ಎರಡು ಕೊಡುಗೆದಾರ ಸಂಸ್ಥೆಗಳಿಂದ ಸರಬರಾಜಾಗುವ ದಿನಸಿಗಳು.

ii. ತಿನ್ನಲು ಸಿದ್ಧವಿರುವ ಆಹಾರ (ready-to-eat)ಗಳು, ಮಕ್ಕಳಿಗೆ ನೇರವಾಗಿ ಹಂಚಬಹುದಾದ ಬೇಯಿಸುವ ಅಗತ್ಯವಿಲ್ಲದ ಆಹಾರ.

iii. ಸ್ಥಳೀಯ ಆಹಾರ ಪದಾರ್ಥಗಳು, ಸ್ಥಳೀಯವಾಗಿ ಉತ್ಪಾದಿಸಲ್ಪಡುವ ಆಹಾರೋತ್ಪನ್ನಗಳು.

ವಿಜಯಾರವ ಜಿಲ್ಲೆಯಲ್ಲಿರುವ ಎಲ್ಲರಿಗೂ ಸಿಗುವಂತೆಯೇ ಅವಳ ಯೋಜನೆಗೂ ಕೇರ್ (CARE) ಸಂಸ್ಥೆಯಿಂದ ಆಹಾರ ಪದಾರ್ಥಗಳು ಸರಬರಾಜಾಗುತ್ತಿದ್ದವು. ಕೇರ್‌ನಿಂದ ಮೆಕ್ಕೆಜೋಳ ಮತ್ತು ಸೋಯಾಬೀನ್ಸ್ ಮಿಶ್ರಿತ ಹಿಟ್ಟು, ಸ್ವಲ್ಪ ಎಣ್ಣೆ

ಮತ್ತು ಬೆಲ್ಲ ಸಿಗುತ್ತಿದ್ದವು. ಈ ದಿನಸಿಗಳಿಂದ ರೊಟ್ಟಿ, ಪೂರಿ, ಪಕೋಡ, ಪುಂಜಿರಿ, ಖಾರ ದೋಸೆ, ಬೆಲ್ಲ ಹಾಕಿದ ದೋಸೆ, ತರಕಾರಿ ಹಾಕಿ ಮಾಡಿದ ಉಪ್ಪಿಟ್ಟು ಹೀಗೆ ಈ ಆಹಾರ ಸಾಮಗ್ರಿಗಳನ್ನು ಮಾಡಬೇಕೆನ್ನುವುದು ನಿರ್ಧಾರವಾಯಿತು. ಉಪ್ಪಿಟ್ಟಿಗೆ ಬೇಕಾಗುವ ತರಕಾರಿಗಳನ್ನು ಸಮುದಾಯದಿಂದ/ತಾಯಂದಿರಿಂದ ತರಿಸಿಕೊಳ್ಳಬಹುದು ಎಂದು ವಿಜಯಾ ಸಲಹೆ ಇತ್ತರು.

- **ಮಕ್ಕಳ ತೂಕ ನೋಡುವ ದಿನಾಂಕಗಳನ್ನು ನಿಗದಿ ಪಡಿಸುವುದು.**

ಎಲ್ಲಾ ಮಕ್ಕಳನ್ನು ಪ್ರತೀ ತಿಂಗಳ ಮೊದಲ ವಾರದಲ್ಲಿ ತೂಕ ಮಾಡಬೇಕು ಎಂದು ವಿಜಯಾರವರು ಮೇಲುಸ್ತುವಾರಿ ಅಧಿಕಾರಿಗಳೊಂದಿಗೆ ಮಾಡಿದ ಸಭೆಯಲ್ಲಿ ನಿರ್ಧರಿಸಲಾಯಿತು. ಮೊದಲ ಎರಡು ದಿನ ಅಂಗನವಾಡಿಗೆ ಬರುವ ಎಲ್ಲಾ ಮಕ್ಕಳನ್ನೂ ತೂಕ ಮಾಡುವುದು, ಮೂರನೆಯ ದಿನ ಅಂಗನವಾಡಿ ಕಾರ್ಯಕರ್ತೆಯರು ಮನೆ ಮನೆಗೂ ತೂಕದ ಯಂತ್ರವನ್ನು ಒಯ್ದು ಅಲ್ಲಿಯೇ ಅಂಗನವಾಡಿಯಲ್ಲಿ ದಾಖಲಾದ ಹಿಂದಿನ ಎರಡು ದಿನ ಅಂಗನವಾಡಿಗೆ ಬರಲಾಗದಿದ್ದ ಮೂರು ವರ್ಷಕ್ಕಿಂತ ಕಡಮೆ ಇರುವ ಎಲ್ಲಾ ಮಕ್ಕಳನ್ನು ತೂಕ ಮಾಡಬೇಕು ಎಂದು ನಿರ್ಣಯಿಸಲಾಯಿತು. ಹೀಗೆ ನಿಯಮಿತವಾಗಿ ಮಕ್ಕಳ ತೂಕವನ್ನು ನೋಡುವ ಕೆಲಸ ನಡೆಯುವುದನ್ನು ಖಚಿತಪಡಿಸುತ್ತದೆ.

- **ಮನೆ ಭೇಟಿ, ತಾಯಂದಿರ ಸಭೆಗಳು ಹಾಗೂ ಸಮುದಾಯ ಸಭೆಗಳನ್ನು ನಿಗದಿ ಪಡಿಸುವುದು.**

ಮಾರ್ಗಸೂಚಿಗಳ ಪ್ರಕಾರ ಅಂಗನವಾಡಿ ಕಾರ್ಯಕರ್ತೆಯು ಶಾಲಾಪೂರ್ವ ಚಟುವಟಿಕೆಗಳಿಗೆ ಬರದೇ ಇರುವ ಅಥವಾ ಅಪೌಷ್ಟಿಕತೆಯಿಂದ ಬಳಲುತ್ತಿರುವ ಅಥವಾ ಕೆಲವು ಆರೋಗ್ಯ ಸಂಬಂಧಿತ ಸಮಸ್ಯೆಗಳಿರುವಂತಹ ಮಕ್ಕಳ ಮನೆಗಳಿಗೆ ಐದು ಸಲ ಮನೆ ಭೇಟಿ ನೀಡಬೇಕು; ಪೌಷ್ಟಿಕತೆ ಮತ್ತು ಆರೋಗ್ಯ ಶಿಕ್ಷಣದ ನಿಮಿತ್ತ ತಾಯಂದಿರ ಸಭೆಗಳನ್ನು ಕರೆಯಬೇಕು; ಗ್ರಾಮದಲ್ಲಿ ಒಂದು ಮಹಿಳಾ ಮಂಡಲ್ ಅನ್ನು ರೂಪಿಸಿ, ಅಂಗನವಾಡಿಯ ಚಟುವಟಿಕೆಗಳಲ್ಲಿ ಆ ಮಹಿಳೆಯರು ಸಹಾಯ ಮಾಡಲು ಸಾಧ್ಯವಾಗುವಂತೆ ಅವರನ್ನು ಸಿದ್ಧಮಾಡಬೇಕು; ಮತ್ತು ಇಡೀ ಸಮುದಾಯದೊಂದಿಗೆ ಸಭೆಗಳನ್ನು ನಡೆಸಬೇಕು.

ಆ ಸಭೆಗಳಲ್ಲಿ ಚರ್ಚಿಸಬಹುದಾದ ವಿಷಯಗಳ ಬಗ್ಗೆ, ಮೊದಮೊದಲಿಗೆ ಯಾವ ಮನೆಗಳಿಗೆ ಭೇಟಿ ನೀಡಬೇಕು ಎಂಬುದರ ಬಗ್ಗೆ, ಎಲ್ಲಾ ಸಭೆಗಳನ್ನು ದಾಖಲಿಸುವ ಬಗ್ಗೆ ಮತ್ತು ಮುಂಬರಿಕೆಯ ಚಟುವಟಿಕೆಗಳನ್ನು ಯೋಜಿಸುವುದರ ಬಗ್ಗೆ ಅಂಗನವಾಡಿ ಕಾರ್ಯಕರ್ತೆಯರಿಗೆ ಕೆಲವು ಮಾರ್ಗಸೂಚಿಗಳನ್ನು ನೀಡಲು ವಿಜಯಾ ಮತ್ತು ಮೇಲುಸ್ತುವಾರಿ ಅಧಿಕಾರಿಗಳು ಯೋಜಿಸಿದರು.

- **ಲಸಿಕೆ ಮತ್ತು ಆರೋಗ್ಯ ತಪಾಸಣೆಗಾಗಿ ದಿನಾಂಕ ನಿಗದಿ.**

ಐಸಿಡಿಎಸ್ ಯೋಜನೆಯ ಕೆಲಸ ಮತ್ತು ಆರೋಗ್ಯಾಧಿಕಾರಿಗಳ ಸಮಯವನ್ನು ಸಮನ್ವಯಗೊಳಿಸುವ ಉದ್ದೇಶದಿಂದ ಮೊದಲು ಪ್ರಾಥಮಿಕ ಆರೋಗ್ಯ ಕೇಂದ್ರದ

ಉಸ್ತುವಾರಿ ಹೊಂದಿದ ಆರೋಗ್ಯಾಧಿಕಾರಿಯನ್ನು (MO) ಸಂಪರ್ಕಿಸಿ ಮಕ್ಕಳಿಗೆ ಲಸಿಕೆ ಮತ್ತು ಆರೋಗ್ಯ ತಪಾಸಣೆಗೆಂದು ನಿಗದಿಪಡಿಸಿದ ಅವರ ವೇಳಾಪಟ್ಟಿಯನ್ನು ತಿಳಿದುಕೊಳ್ಳುವುದು ಅಗತ್ಯವೆಂದು ವಿಜಯಾರವರಿಗೆ ಗೊತ್ತಿತ್ತು. ತನ್ನ ವ್ಯಾಪ್ತಿಗೆ ಬರುವ ಗ್ರಾಮದಲ್ಲಿ ಲಸಿಕೆ ಮತ್ತು ಆರೋಗ್ಯ ತಪಾಸಣೆಗಾಗಿ ಯಾವ ದಿನಾಂಕವನ್ನು ನಿಗದಿ ಪಡಿಸಲಾಗುತ್ತದೆಯೋ ಆ ದಿನದಂದು ಅಂಗನವಾಡಿ ಕಾರ್ಯಕರ್ತೆಯು ತಾನೂ ಸಿದ್ಧವಾಗಿರಬೇಕು ಮತ್ತು ಫಲಾನುಭವಿ ಮಕ್ಕಳನ್ನೂ ಸಿದ್ಧ ಮಾಡಬೇಕು. ಆರೋಗ್ಯಾಧಿಕಾರಿಯನ್ನು ಆದಷ್ಟು ಬೇಗ ಸಂಪರ್ಕಿಸಲು ವಿಜಯಾ ನಿರ್ಧರಿಸಿದರು.

- **ಅಂಗನವಾಡಿ ಕೇಂದ್ರಗಳಿಗೆ ಎಲ್ಲಾ ಅಗತ್ಯ ಸಾಧನ ಸಾಮಗ್ರಿಗಳನ್ನು ಸರಬರಾಜು ಮಾಡುವುದು.**

ಸೇವೆಗಳನ್ನು ಒದಗಿಸುವುದನ್ನು ಪ್ರಾರಂಭಿಸಲು ಎಲ್ಲಾ ಅಂಗನವಾಡಿಗಳಿಗೆ ಸಾಧನ ಸಾಮಗ್ರಿಗಳನ್ನು ಸರಬರಾಜು ಮಾಡುವುದು ಸಿಡಿಪಿಒ ರವರ ಜವಾಬ್ದಾರಿಯಾಗಿದೆ. ಪ್ರತೀ ಕೇಂದ್ರಕ್ಕೂ ಕಳುಹಿಸಬೇಕಾದ ಸಾಮಗ್ರಿಗಳ ಪಟ್ಟಿಯನ್ನು ಮೇಲುಸ್ತುವಾರಿ ಅಧಿಕಾರಿಗಳು ಆಗಲೇ ತಯಾರಿಸಿದ್ದರು. ವಿಭಾಗ 19.7 ಅನ್ನು ಓದಿರುವುದರಿಂದ ನೀವು ಆ ಸಾಮಾನುಗಳನ್ನು ಇಲ್ಲಿ ಪಟ್ಟಿ ಮಾಡಬಹುದೇ?

---

---

- **ಮೇಲುಸ್ತುವಾರಿ ಅಧಿಕಾರಿಗಳು ಮತ್ತು ಅಂಗನವಾಡಿ ಕಾರ್ಯಕರ್ತೆಯರೊಂದಿಗೆ ಸಭೆಗಳನ್ನು ನಡೆಸಬೇಕಾದ ದಿನಾಂಕಗಳನ್ನು ನಿಗದಿ ಪಡಿಸುವುದು.**

ವಿಜಯ ಅವರು ತಾನು ಅಂಗನವಾಡಿ ಕೇಂದ್ರಗಳಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಗಮನಿಸಿದ ಸಂಗತಿಗಳನ್ನು ಕುರಿತು ಚರ್ಚಿಸಲು ಮತ್ತು ವಿಭಿನ್ನ ಸೇವೆಗಳನ್ನು ಇನ್ನೂ ಪರಿಣಾಮಕಾರಿಯಾಗಿ ತಲುಪಿಸಲು ಸಾಧ್ಯವಾಗುವಂತೆ ಅವರ ಕೌಶಲ್ಯಗಳನ್ನು ನವೀಕರಿಸಲು ಮೇಲುಸ್ತುವಾರಿ ಅಧಿಕಾರಿಗಳೊಂದಿಗೆ ಪ್ರತೀ ತಿಂಗಳಿಗೆ ಕನಿಷ್ಠ ಎರಡು ಬಾರಿ ಮತ್ತು ಅಂಗನವಾಡಿ ಕಾರ್ಯಕರ್ತೆಯರೊಂದಿಗೆ ಕನಿಷ್ಠ ಒಂದು ಬಾರಿ ಸಭೆ ನಡೆಸುವುದಾಗಿ ಪ್ರಸ್ತಾಪಿಸಿದರು.

ಅಂಗನವಾಡಿ ಕಾರ್ಯಕರ್ತೆಯರು ಒಪ್ಪಿಸುವ ತಿಂಗಳ ಪ್ರಗತಿ ವರದಿಗಳನ್ನು ಸಂಕ್ಷಿಪ್ತಗೊಳಿಸಿ ಪ್ರತೀ ತಿಂಗಳ ಮೊದಲ ದಿನದಂದು ಯೋಜನಾಧಿಕಾರಿಗೆ ಕಳುಹಿಸಬೇಕು ಎನ್ನುವುದನ್ನು ಮೇಲುಸ್ತುವಾರಿ ಅಧಿಕಾರಿಗಳಿಗೆ ವಿಜಯಾರವರು ನೆನಪಿಸಿದರು.

- **ಮಹಿಳಾ ಮಂಡಲ್‌ಗಳನ್ನು ರೂಪಿಸುವುದು**

ಮಹಿಳಾ ಮಂಡಲ್ ಆ ಗ್ರಾಮದ ಮಹಿಳಾ ಗುಂಪಾಗಿದ್ದು ಅದರ ಸದಸ್ಯರು ಗ್ರಾಮದ ಇತರ ಮಹಿಳೆಯರಿಂದ ಆಯ್ಕೆ ಮಾಡಲ್ಪಟ್ಟವರಾಗಿರುತ್ತಾರೆ. ಗ್ರಾಮದ ಮಹಿಳೆಯರ ಸ್ಥಿತಿಗತಿಗಳನ್ನು ಸುಧಾರಿಸುವ ನಿಟ್ಟಿನಲ್ಲಿ ಯೋಜನೆಗಳನ್ನು ಹಮ್ಮಿಕೊಳ್ಳುವುದು ಮತ್ತು ಚಟುವಟಿಕೆಗಳನ್ನು ನಡೆಸುವ ಉದ್ದೇಶದಿಂದ ಅದನ್ನು ರೂಪಿಸಲಾಗುತ್ತದೆ.

ಗ್ರಾಮದ ಸ್ವಚ್ಛತೆ, ಗ್ರಾಮದ ನೀರಿನ ಪಂಪುಗಳನ್ನು ನೋಡಿಕೊಳ್ಳುವುದು, ಆದಾಯೋತ್ಪನ್ನ ಚಟುವಟಿಕೆಯೊಂದನ್ನು ಆರಂಭಿಸುವುದು ಮತ್ತು ಅದಕ್ಕಾಗಿ ತರಬೇತಿ ಪಡೆಯುವುದು, ಮಕ್ಕಳು ಶಾಲೆಗೆ ಬರುವಂತೆ ನೋಡಿಕೊಳ್ಳುವುದು, ಅವರೆಲ್ಲ ಲಸಿಕೆ ಹಾಕಿಕೊಂಡಿದ್ದಾರೆಯೇ ಎಂದು ಖಚಿತಪಡಿಸುವುದು ಹೀಗೆ ಹಲವು ಜವಾಬ್ದಾರಿಗಳನ್ನು ಈ ಮಹಿಳಾ ಮಂಡಲ್‌ಗಳು ನಿರ್ವಹಿಸಬಹುದಾಗಿದೆ. ಅಂಗನವಾಡಿ ಕಾರ್ಯಕರ್ತೆಯರು ತಮ್ಮ ತಮ್ಮ ಗ್ರಾಮದ ಆಯಾ ಮೇಲುಸ್ತುವಾರಿ ಅಧಿಕಾರಗಳ ಸಹಕಾರದೊಂದಿಗೆ ಈ ಮಹಿಳಾ ಮಂಡಲ್‌ಗಳನ್ನು ಹೇಗೆ ರೂಪಿಸಬಹುದು ಎಂಬುದರ ಬಗ್ಗೆ ಅವರಿಗೆ ಸಲಹೆ-ಸೂಚನೆ ನೀಡಲು ವಿಜಯಾ ನಿರ್ಧರಿಸಿದರು.

- **ಅಂಗನವಾಡಿ ಕಾರ್ಯಕರ್ತೆಯರು ಇಟ್ಟುಕೊಳ್ಳಬೇಕಾದ ದಾಖಲೆ ಪುಸ್ತಕಗಳನ್ನು ನಿರ್ಧರಿಸುವುದು.**

ಕಾರ್ಯಕರ್ತೆಯರು ಕೆಲವು ಮಾದರಿ ರೆಜಿಸ್ಟರ್‌ಗಳನ್ನು ತುಂಬಬೇಕಾಗುತ್ತದೆ. ಕೆಲವನ್ನು ನಿತ್ಯವೂ ತುಂಬಬೇಕು, ಕೆಲವನ್ನು ತಿಂಗಳಿಗೊಮ್ಮೆ ಮತ್ತು ಇನ್ನೂ ಕೆಲವನ್ನು ಮೂರು ತಿಂಗಳಿಗೊಮ್ಮೆ ತುಂಬಬೇಕು. ಉತ್ತರಾಬಾಯಿಯು ನಿತ್ಯದ *ದಿನಚರಿ* ಪುಸ್ತಕದಲ್ಲಿ ವಿವರಗಳನ್ನು ತುಂಬಿದ್ದು ನೆನಪಿದೆಯೇ? ಹೌದು, ಅವು ಹೀಗಿದ್ದವು:

- ಶಾಲಾಪೂರ್ವ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವ ಮಕ್ಕಳ ಹಾಜರಾತಿ ರೆಜಿಸ್ಟರ್
- ಗರ್ಭಿಣಿಯರು ಮತ್ತು ಬಾಣಂತಿಯರಿಗೆ ಕಬ್ಬಿಣಾಂಶದ ಮತ್ತು ಫೋಲಿಕ್ ಆಸಿಡ್ ಗುಳಿಗೆಗಳನ್ನು ನೀಡುವಂತಹ ಸೇವೆಗಳ ರೆಜಿಸ್ಟರ್
- ಪೂರಕ ಪೌಷ್ಟಿಕ ಆಹಾರದ ರೆಜಿಸ್ಟರ್
- ನಿತ್ಯದ ದಿನಚರಿ ಪುಸ್ತಕ
- ಮನೆ ಭೇಟಿಗಳ ರೆಜಿಸ್ಟರ್

ಅಂಗನವಾಡಿ ಕಾರ್ಯಕರ್ತೆಯರು **ವಾರಕ್ಕೊಮ್ಮೆ** ತುಂಬಬೇಕಾದ ದಾಖಲೆ ಪುಸ್ತಕಗಳು ಮತ್ತು ರೆಜಿಸ್ಟರ್‌ಗಳು:

- ಲಸಿಕೆಯ ರೆಜಿಸ್ಟರ್
- ಆರೋಗ್ಯ ತಪಾಸಣೆಯ ರೆಜಿಸ್ಟರ್

ಕಾರ್ಯಕರ್ತೆಯರು **ತಿಂಗಳಿಗೊಮ್ಮೆ** ತುಂಬಬೇಕಾದ ದಾಖಲೆ ಪುಸ್ತಕಗಳು ಮತ್ತು ರೆಜಿಸ್ಟರ್‌ಗಳು:

- ಮಕ್ಕಳ ಬೆಳವಣಿಗೆಯ ರೆಜಿಸ್ಟರ್
  ಪ್ರತೀ ತಿಂಗಳು ಬೆಳವಣಿಗೆಯ ನಕ್ಷೆಗಳ ಮೇಲೆ ಮಕ್ಕಳ ತೂಕವನ್ನು ಗುರುತು ಮಾಡಲಾಗುತ್ತದೆ.
- ತಿಂಗಳ ಪ್ರಗತಿಯ ವರದಿ
  ಇದರಲ್ಲಿ ಆ ಗ್ರಾಮದ ಜನಸಂಖ್ಯೆಯ ವರದಿ, ಜನಿಸಿದ ಮಕ್ಕಳ ಸಂಖ್ಯೆ, ಆ ತಿಂಗಳಲ್ಲಿ ಮರಣ ಹೊಂದಿದ ಶಿಶುಗಳು ಮತ್ತು ತಾಯಂದಿರ ಸಂಖ್ಯೆ,

ಶಾಲಾಪೂರ್ವ ಚಟುವಟಿಕೆಗಳಿಗೆ ಹಾಜರಾಗುವ ಮಕ್ಕಳ ಸಂಖ್ಯೆ, ಅಪೌಷ್ಟಿಕತೆಯ ನಾಲ್ಕು ಶ್ರೇಣಿಗಳಲ್ಲಿ ಪ್ರತೀ ಶ್ರೇಣಿಯಲ್ಲಿರುವ ಮಕ್ಕಳ ಸಂಖ್ಯೆ, ಪೂರಕ ಆಹಾರವನ್ನು ವಿತರಿಸಿದ ದಿನಗಳ ಸಂಖ್ಯೆ, ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಕಳುಹಿಸಿದ ಮಕ್ಕಳು ಮತ್ತು ತಾಯಂದಿರ ಸಂಖ್ಯೆ, ಎದುರಿಸಿದ ಸಮಸ್ಯೆಗಳು ಇತ್ಯಾದಿಗಳನ್ನು ಬರೆದಿಡಲಾಗುತ್ತದೆ.

- ಮಹಿಳಾ ಮಂಡಲ್/ ತಾಯಂದಿರ ಸಭೆಗಳ ದಾಖಲೆಗಳು
  ಸಭೆ ನಡೆದ ದಿನಾಂಕ, ಅಲ್ಲಿ ಹಾಜರಿದ್ದವರ ಹೆಸರುಗಳು, ಕೈಗೊಂಡ ಮುಖ್ಯ ನಿರ್ಣಯಗಳು, ಮತ್ತು ಯೋಜಿಸಿದ ಮುಂಬರಿಕೆ ಕಾರ್ಯ ಇವೆಲ್ಲವನ್ನು ಬರೆಯಲಾಗುತ್ತದೆ.

ಅಂಗನವಾಡಿ ಕಾರ್ಯಕರ್ತೆಯು **ಪ್ರತೀ ಮೂರು ಅಥವಾ ಆರು ತಿಂಗಳಿಗೊಮ್ಮೆ** ತುಂಬಬೇಕಾದ ದಾಖಲೆ ಪುಸ್ತಕಗಳು ಮತ್ತು ರೆಜಿಸ್ಟರ್‌ಗಳು:

- ಸಮೀಕ್ಷೆಯ ರೆಜಿಸ್ಟರ್
  ನೀವು ಇದರ ಬಗ್ಗೆ ವಿಭಾಗ 19.7 ರಲ್ಲಿ ಓದಿದ್ದೀರಿ.
- ಅರ್ಧ ವಾರ್ಷಿಕ ಪ್ರಗತಿ ವರದಿಗಳು
  ಇವು ಆರು ತಿಂಗಳಿನ ಮಾಸಿಕ ವರದಿಯ ದತ್ತಾಂಶಗಳ ಸಂಕಲನವಾಗಿರುತ್ತದೆ. ಇದರಲ್ಲಿ ಕೇವಲ ಅಂಕಿ-ಸಂಖ್ಯೆಗಳಷ್ಟೇ ಅಲ್ಲದೇ ಸೇವೆಗಳನ್ನು ಹೇಗೆ ಒದಗಿಸಲಾಗುತ್ತಿದೆ ಎಂಬಂತಹ ಕೆಲವು ಗುಣಮಟ್ಟದ ದತ್ತಾಂಶಗಳೂ ಇರುತ್ತವೆ.

ಇವಿಷ್ಟೇ ಅಲ್ಲದೆ ಅಂಗನವಾಡಿ ಕಾರ್ಯಕರ್ತೆಯು ಅವಶ್ಯಕತೆ ಬಿದ್ದಾಗ ತುಂಬಬೇಕಾದ ದಾಖಲೆಗಳು ಇಂತಿವೆ:

- ಕುರಿಯರಿಕೆ ಸೇವಾ ರೆಜಿಸ್ಟರ್
- ಪ್ರಥಮ ಚಿಕಿತ್ಸಾ ಪೆಟ್ಟಿಗೆಯಿಂದ ನೀಡಲಾದ ಔಷಧಗಳು
- ಅಂಗನವಾಡಿಗೆ ಸರಬರಾಜಾದ ಎಲ್ಲಾ ಸಾಧನ ಸಲಕರಣೆಗಳ ದಾಸ್ತಾನು ರೆಜಿಸ್ಟರ್

ಈ ಮೇಲಿನ ಮೂರು ರೆಜಿಸ್ಟರ್‌ಗಳಲ್ಲಿ ಯಾವ ರೀತಿಯ ದತ್ತಾಂಶಗಳನ್ನು ತುಂಬಲಾಗುತ್ತದೆ ಎಂದು ಹೇಳುವಿರಾ?

ಒಂದಕ್ಕೊಂದು ಸಂಬಂಧಪಟ್ಟ ಮಾಹಿತಿಗಳಿರುವ ರೆಜಿಸ್ಟರ್‌ಗಳನ್ನು ಒಟ್ಟುಗೂಡಿಸಿ ಒಂದು ರೆಜಿಸ್ಟರ್ ಮಾಡಬಹುದು ಎಂದು ವಿಜಯಾರವರಿಗೆ ಅನಿಸಿತು. ಅಂತೆಯೇ ಪ್ರತೀ ಮಗುವನ್ನು ಕುರಿತ ಮಾಹಿತಿಗಳು ಒಂದೆಡೆ ಲಭ್ಯವಾಗಲೆಂದು ಆರೋಗ್ಯಕ್ಕೆ ಸಂಬಂಧಪಟ್ಟ ಎಲ್ಲಾ ರೆಜಿಸ್ಟರ್‌ಗಳನ್ನು ಒಟ್ಟಾಗಿಸಿ ಒಂದು ರೆಜಿಸ್ಟರ್ ಮಾಡಲು ನಿರ್ಧರಿಸಿದರು.

ಪ್ರತೀ ಕಾರ್ಯಕರ್ತೆಗೂ ಈ ಎಲ್ಲಾ ರೆಜಿಸ್ಟರ್‌ಗಳು ಸಿಗುವಂತೆ ವಿಜಯಾ ನೋಡಿಕೊಳ್ಳಬೇಕಿತ್ತು. ಈ ಪ್ರತಿಯೊಂದೂ ರೆಜಿಸ್ಟರ್‌ಗಳಲ್ಲಿ ಯಾವ ರೀತಿಯ ವಿವರಗಳನ್ನು ತುಂಬಬೇಕು ಎನ್ನುವುದು ಈಗ ನಿಮಗೆ ತಿಳಿದಿರುವುದರಿಂದ ಈ ಮಾಹಿತಿಗಳನ್ನು ರಾಜ್ಯಮಟ್ಟದಲ್ಲಿ ಹೇಗೆ ಬಳಸಲಾಗುತ್ತದೆ ಎಂಬುದನ್ನು ಹೇಳುವಿರಾ? ಈ ವಿಷಯವನ್ನು ಕುರಿತು ನಂತರ ಹೆಚ್ಚು ವಿವರವಾಗಿ ಮಾತಾಡೋಣ.

- **ಸಾಧಿಸಬೇಕಾದ ಗುರಿಗಳನ್ನು ಯೋಜಿಸುವುದು**

ಅಂತಿಮವಾಗಿ ನಾವು ವಿಜಯಾರವರು ಯೋಜಿಸಿದ ಕಾರ್ಯಗಳಲ್ಲಿ ಅತೀ ಮುಖ್ಯವಾದ ಭಾಗಕ್ಕೆ ಬಂದಿದ್ದೇವೆ; ಅದೇನೆಂದರೆ, ಐಸಿಡಿಎಸ್ ಯೋಜನೆಯ ಉದ್ದೇಶಗಳನ್ನು ಆಧರಿಸಿ ಸಾಧಿಸಬೇಕಾದ ಗುರಿಗಳನ್ನು ನಿರ್ಧರಿಸುವುದು. ಈಗ ಈ ಗುರಿಗಳನ್ನು ನಿರ್ದಿಷ್ಟವಾಗಿ ಭಾರತ ಸರ್ಕಾರವು ಯೋಜಿಸಿದ ಗುರಿಗಳಿಗೆ ಅನುಗುಣವಾಗಿಯೇ ನಿಗದಿಪಡಿಸಲಾಗಿದೆ. ಅವು ಇಂತಿವೆ:

- ಮಕ್ಕಳ ಮರಣ ಪ್ರಮಾಣವನ್ನು ಕಡಮೆ ಮಾಡುವುದು
- ತಾಯಂದಿರ ಮರಣ ಪ್ರಮಾಣವನ್ನು ಕಡಮೆ ಮಾಡುವುದು
- ತೀವ್ರವಾಗಿ ಅಪೌಷ್ಟಿಕತೆಯಿಂದ ಬಳಲುತ್ತಿರುವ ಮಕ್ಕಳ ಪ್ರಮಾಣವನ್ನು ಅರ್ಧದಷ್ಟು ಕಡಮೆ ಮಾಡುವುದು
- ಮಕ್ಕಳು ಮತ್ತು ತಾಯಂದಿರ ಅನಾರೋಗ್ಯದ ಪ್ರಮಾಣವನ್ನು ಕಡಮೆ ಮಾಡುವುದು
- ಸರ್ವರಿಗೂ ಶಿಕ್ಷಣದ ಗುರಿಯನ್ನು ಸಾಧಿಸಲು ಮಕ್ಕಳ ಶಾಲೆಯ ದಾಖಲಾತಿಯನ್ನು ಹೆಚ್ಚಿಸುವುದು
- ಮಕ್ಕಳು ಶಾಲೆ ಬಿಡುವ ಪ್ರಮಾಣವನ್ನು ಕಡಮೆ ಮಾಡುವುದು
- ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ಅಥವಾ ತರಬೇತಿ ಹೊಂದಿದ ಪ್ರಸೂತಿ ಸಹಾಯಕರಿಂದ *(ದಾದಿ)* ಹೆರಿಗೆ ಮಾಡಿಸಲು ಎಲ್ಲಾ ಗರ್ಭಿಣಿ ಮಹಿಳೆಯರನ್ನು ನೋಂದಣಿ ಮಾಡಿಕೊಳ್ಳುವುದು
- ಶೇಕಡ ೯೦% ಮಕ್ಕಳು ಮತ್ತು ಗರ್ಭಿಣಿ ತಾಯಂದಿರಿಗೆ ಲಸಿಕೆ ಹಾಕಿಸುವುದು
- ನಿಯಮಿತವಾಗಿ ಮಕ್ಕಳ ಬೆಳವಣಿಗೆಯ ಮೇಲೆ ನಿಗಾ ವಹಿಸುವುದು

ವಿಜಯಾ ಅವರ ಉದ್ದೇಶಗಳನ್ನು ಈ ರಾಷ್ಟ್ರೀಯ ಉದ್ದೇಶಗಳಿಗೆ ಅನುಗುಣವಾಗಿ ಮತ್ತು ಅದರ ಜೊತೆಗೆ ಅವರ ಯೋಜನಾ ಕ್ಷೇತ್ರದಲ್ಲಿನ ಪ್ರಚಲಿತ ಸನ್ನಿವೇಶಕ್ಕೆ ಅನುಗುಣವಾಗಿ ಯೋಜಿಸಬೇಕಾಗಿತ್ತು. ಸಮುದಾಯದ ಸದಸ್ಯರೊಂದಿಗೆ ನಡೆಸಿದ ಸಮೀಕ್ಷೆ ಮತ್ತು ಚರ್ಚೆಗಳಿಂದ ತಮ್ಮ ಕ್ಷೇತ್ರದ ಮಕ್ಕಳು ಭೇದಿಯಿಂದ ಬಳಲುತ್ತಿದ್ದಾರೆ ಮತ್ತು ಅದರಿಂದಾಗಿ ಹಲವು ಸಾವುಗಳೂ ಆಗಿವೆ ಎಂಬುದು ವಿಜಯಾರವರಿಗೆ ತಿಳಿದು ಬಂದಿತ್ತು. ಅಸುರಕ್ಷಿತ ನೀರಿನ ಸೇವನೆಯಿಂದಾಗಿ ಕೆಲವು ಮಕ್ಕಳು ಹೊಟ್ಟೆಹುಳಗಳಿಂದಲೂ ಬಾಧಿತರಾಗಿರುವುದು ಕಂಡು ಬಂದಿತ್ತು. ಎಲ್ಲ ಲಸಿಕೆಗಳನ್ನು ಹಾಕಿಸಿಕೊಂಡ ಮಕ್ಕಳ ಸಂಖ್ಯೆ ಅತಿ ಕಡಮೆ ಇತ್ತು. ಈ ಸಮಸ್ಯೆಗಳನ್ನು ಹಂತಹಂತಗಳಲ್ಲಿ ಪರಿಹರಿಸುವ ಗುರಿಯನ್ನು ವಿಜಯಾರವರು

ಹೊಂದಿದ್ದರು. ಅದರ ಅಂಗವಾಗಿ ಮೊದಲ ಯೋಜನೆಯು ತಾಯಂದಿರಿಗೆ ಈ ಕೆಳಗಿನ ಅಂಶಗಳ ಬಗ್ಗೆ ಅರಿವು ಮೂಡಿಸುವುದು:

i. ಕುಡಿಯುವ ನೀರನ್ನು ಸುರಕ್ಷಿತಗೊಳಿಸುವುದು
ii. ಭೇದಿಯಿಂದ ಬಳಲುತ್ತಿರುವ ತಮ್ಮ ಮಕ್ಕಳಿಗೆ ಸರಿಯಾದ ಆರೈಕೆ ನೀಡುವುದು
iii. ತಮ್ಮ ಮಕ್ಕಳಿಗೆ ಲಸಿಕೆ ಹಾಕಿಸುವುದು

ಇದನ್ನು ಮಾಡಲು ವಿಜಯ ಅವಳ ಆರೋಗ್ಯಾಧಿಕಾರಿಯನ್ನು ಭೇಟಿ ಮಾಡಬೇಕಾಗುತ್ತದೆ. ಬಿಡಿಓ ರವರ ಸಹಕಾರದೊಂದಿಗೆ ಕೈಪಂಪುಗಳು ಇರದ ಗ್ರಾಮದಲ್ಲಿ ಕೈಪಂಪುಗಳನ್ನು ಹಾಕಿಸಬೇಕಾಗಿದೆ ಮತ್ತು ಅವುಗಳನ್ನು ನೋಡಿಕೊಳ್ಳಲು ಊರಿನ ಮಹಿಳಾ ಮಂಡಲ್ ಸದಸ್ಯರಿಗೆ ತರಬೇತಿ ನೀಡಬೇಕಾಗಿದೆ. ಈ ಕುರಿತು ತಾಯಂದಿರಿಗೆ ಅರಿವು ಮೂಡಿಸಲು ಪ್ರತೀ ಕಾರ್ಯಕರ್ತೆಯು ತಿಂಗಳಿಗೆ ಎರಡು ಬಾರಿಯಾದರೂ ತಾಯಂದಿರ ಸಭೆ ಮಾಡಬೇಕು ಎಂದು ವಿಜಯಾ ನಿರ್ಧರಿಸಿದರು. ಮೇಲುಸ್ತುವಾರಿ ಅಧಿಕಾರಿಗಳು ಪ್ರತೀ ಗ್ರಾಮದಲ್ಲಿಯೂ ನಡೆಯುವ ಸಭೆಗಳಲ್ಲಿ ಒಂದು ಸಭೆಯಲ್ಲಾದರೂ ಉಪಸ್ಥಿತರಿರಲು ಪ್ರಯತ್ನಿಸಬೇಕು. ಈ ತಾಯಂದಿರ ಸಭೆಗಳಿಗೆ ನಿರ್ದಿಷ್ಟವಾಗಿ ಭೇದಿಯಿಂದ ಬಳಲುತ್ತಿರುವ ಮಕ್ಕಳ ತಾಯಂದಿರು ಅಥವಾ ಲಸಿಕೆ ಹಾಕಿರದ ಮಕ್ಕಳ ತಾಯಂದಿರು ಹಾಜರಿರುವಂತೆ ನೋಡಿಕೊಳ್ಳಬೇಕು. ಗ್ರಾಮಸ್ಥರು ತಮ್ಮ ಗ್ರಾಮವನ್ನು ಸ್ವಚ್ಛವಾಗಿಟ್ಟುಕೊಳ್ಳುವುದರ ಮೇಲೂ ಸಹ ಅಂಗನವಾಡಿ ಕಾರ್ಯಕರ್ತೆಯರು ಗಮನ ಹರಿಸಬೇಕು. ಇದಕ್ಕಾಗಿ ಸಮುದಾಯ ಸಭೆಗಳನ್ನು ಆಯೋಜಿಸಬೇಕಾಗಬಹುದು ಮತ್ತು ಮಹಿಳಾ ಮಂಡಲ್‌ಗಳನ್ನು ಸೇರಿಸಿಕೊಳ್ಳಬೇಕಾಗಬಹುದು.

## ನಿಮ್ಮ ಪ್ರಗತಿಯನ್ನು ಪರಿಶೀಲಿಸಿಕೊಳ್ಳಿ: ಅಭ್ಯಾಸ ಚಟುವಟಿಕೆ 3

1. ರಾಂಪುರದ ಐಸಿಡಿಎಸ್ ಯೋಜನೆಯ ಅಡಿಯಲ್ಲಿ ಬರುವ ಗ್ರಾಮಗಳಲ್ಲಿನ ತಾಯಂದಿರು ಮತ್ತು ಮಕ್ಕಳ ಚಿತ್ರಣವನ್ನು ಓದಿ. ಹಿಂದಿನ ವಿಭಾಗದಲ್ಲಿ ಕೊಟ್ಟ ರಾಷ್ಟ್ರೀಯ ಗುರಿಗಳನ್ನು ಗಮನದಲ್ಲಿಟ್ಟುಕೊಂಡು ಆ ಕ್ಷೇತ್ರದ ಸಿಡಿಪಿಓ ತನ್ನ ವ್ಯಾಪ್ತಿಗೆ ಬರುವ ಐಸಿಡಿಯೆಸ್ ಯೋಜನೆಗೆ ನಿರ್ಧರಿಸಿಕೊಳ್ಳಬೇಕಾದ ಐದು ಗುರಿಗಳನ್ನು ಪಟ್ಟಿ ಮಾಡಿ.

   ರಾಂಪುರ ಗ್ರಾಮವು ಒಂದು ಬುಡಕಟ್ಟು ಪ್ರದೇಶದಲ್ಲಿದೆ. ರಾಂಪುರವನ್ನು ತಲುಪಲು ನೀವು ಗಾರ್ಹಿ ಬ್ಲಾಕ್ ಮುಖ್ಯ ಕೇಂದ್ರದಿಂದ ಬಸ್ಸು ಹತ್ತಬೇಕು. ಎರಡು ತಾಸುಗಳ ಪ್ರಯಾಣದ ನಂತರ ನೀವು ಮಾಧೊಪುರ ಗ್ರಾಮದಲ್ಲಿ ಇಳಿದುಕೊಳ್ಳಬೇಕು. ಇಲ್ಲಿಂದ ರಾಂಪುರವನ್ನು ತಲುಪಲು ನೀವು 5-6 ಕಿ.ಮಿ ದೂರ ನಡೆಯಬೇಕು. ರಾಂಪುರದ ಮಕ್ಕಳು ಅಪೌಷ್ಟಿಕತೆಯಿಂದ ಬಳಲುತ್ತಿದ್ದಾರೆ. ಹೆಚ್ಚುಕಮ್ಮಿ 10 ಮಕ್ಕಳು ತೀವ್ರ ಅಪೌಷ್ಟಿಕತೆಯಿಂದ ಬಳಲುತ್ತಿದ್ದಾರೆ. ಕಳೆದ ವರ್ಷ ಹುಟ್ಟಿದ ಮಕ್ಕಳಲ್ಲಿ ಇಬ್ಬರಿಗೆ ಮಾತ್ರ ಪೋಲಿಯೋ ಮೌಖಿಕ ಲಸಿಕೆಯ ಮೊದಲ ಡೋಸ್ ಆಗಿದೆ ಮತ್ತು ಡಿಪಿಟಿ ಲಸಿಕೆ

ಆಗಿದೆ. ಅಲ್ಲಿ ಎಲ್ಲಾ ಹೆರಿಗೆಗಳನ್ನೂ ಒಬ್ಬ ಸಾಂಪ್ರದಾಯಿಕ ದಾದಿ ಮಾಡುತ್ತಾಳೆ. ಈ ಹೆರಿಗೆಗಳ ಸಂದರ್ಭದಲ್ಲಿ ಕೆಲವೊಮ್ಮೆ ಮಕ್ಕಳು ಮತ್ತು ಕೆಲವೊಮ್ಮೆ ತಾಯಂದಿರು ಸಹ ಸಾಯುತ್ತಾರೆ. ಹೆಚ್ಚಿನ ಮಹಿಳೆಯರು ಕಾಡಿನಿಂದ ಕಟ್ಟಿಗೆ ತರುವ ಅಥವಾ ಹೊಲಗದ್ದೆಗಳಲ್ಲಿ ಕೆಲಸ ಮಾಡುತ್ತಾರೆ. ಹಾಗೆ ಕೆಲಸಕ್ಕೆ ಹೋಗುವಾಗ ಅವರು ತಮ್ಮ ಮಕ್ಕಳನ್ನೂ ಜೊತೆಗೆ ಒಯ್ಯುತ್ತಾರೆ. ಅವರಲ್ಲಿ ಕೆಲವರು ಅಂಗನವಾಡಿಯಲ್ಲಿ ನೋಂದಣಿ ಮಾಡಿದವರೂ ಇರುತ್ತಾರೆ. ಆ ಗ್ರಾಮದ ಯಾವ ಹೆಣ್ಣು ಮಕ್ಕಳೂ ಶಾಲೆಗೆ ಹೋಗುವುದಿಲ್ಲ.

ನಿಮ್ಮ ಗುರಿಗಳನ್ನು ಈ ಕೆಳಗಿನ ಜಾಗದಲ್ಲಿ ಪಟ್ಟಿ ಮಾಡಿ:

i. -------------------------

ii. -------------------------

iii. -------------------------

iv. -------------------------

v. -------------------------

## 19.9 ಮೇಲುಸ್ತುವಾರಿ ಅಧಿಕಾರಿಗಳಿಂದ ಯೋಜನೆಯ ರೂಪಣೆ

ಮೇಲುಸ್ತುವಾರಿ ಅಧಿಕಾರಿಗಳೊಂದಿಗೆ ಸೇರಿಕೊಂಡು ಸಿಡಿಪಿಒ ರವರು ಯೋಜನೆಗಳನ್ನು ಸಿದ್ಧಮಾಡಿದ ನಂತರ ಈಗ ಮೇಲುಸ್ತುವಾರಿ ಅಧಿಕಾರಿಗಳು ತಮ್ಮ ವಲಯದ ಯೋಜನೆಯನ್ನು ರೂಪಿಸಬೇಕು. ಮೇಲುಸ್ತುವಾರಿ ಅಧಿಕಾರಿಯ ಕೆಲಸವು ತಮ್ಮ ಸುಪರ್ದಿಯಲ್ಲಿ ಬರುವ ಅಂಗನವಾಡಿಗಳಲ್ಲಿ ಕಾರ್ಯಕರ್ತೆಯರು ಸೇವೆಗಳನ್ನು ಸಮರ್ಪಕವಾಗಿ ಕೊಡುತ್ತಿದ್ದಾರೆಯೆ ಎಂಬುದನ್ನು ನೋಡಿಕೊಳ್ಳುವುದು, ಕಾರ್ಯಕರ್ತೆಯರ ದುರ್ಬಲ ಅಂಶಗಳನ್ನು ಗಮನಿಸಿ ಸೇವೆಗಳನ್ನು ಪರಿಣಾಮಕಾರಿಯಾಗಿ ಒದಗಿಸುವ ಕಾರ್ಯದಲ್ಲಿ ಅವರು ಇನ್ನಷ್ಟು ನಿಪುಣರಾಗಲು ಅವರಿಗೆ ತಿಳುವಳಿಕೆ ನೀಡುವುದನ್ನು ಮುಂದುವರೆಸುವುದು ಇತ್ಯಾದಿ ಜವಾಬ್ದಾರಿಗಳೂ ಮೇಲುಸ್ತುವಾರಿ ಅಧಿಕಾರಿಗಳಿಗೆ ಇವೆ. ಮೇಲುಸ್ತುವಾರಿ ಅಧಿಕಾರಿ ಯೋಜಿಸಬೇಕಾದ ಕಾರ್ಯಗಳು ಹೀಗಿವೆ:

- ಅಂಗನವಾಡಿಗಳಿಗೆ ಭೇಟಿ ನೀಡುವುದು. ಪ್ರತಿ ಮೇಲುಸ್ತುವಾರಿ ಅಧಿಕಾರಿಗೆ 20-25 ಅಂಗನವಾಡಿಗಳ ಹೊಣೆ ಇರುತ್ತದೆ. ಈ 20-25 ಅಂಗನವಾಡಿಗಳ ಗುಂಪನ್ನು ***ವಲಯ***ವೆನ್ನುತ್ತಾರೆ. ಎಲ್ಲಾ ಅಂಗನವಾಡಿಗಳನ್ನು ಸೇರಿ ಅವರು ತಿಂಗಳಲ್ಲಿ 20-25 ಭೇಟಿಗಳನ್ನು ನೀಡಬೇಕು. ಅಂದರೆ ಪ್ರತೀ ತಿಂಗಳೂ ಅವರ ವಲಯದಲ್ಲಿನ ಪ್ರತೀ ಅಂಗನವಾಡಿಗೆ ಒಂದು ಭೇಟಿಯನ್ನಾದರೂ ಆಕೆ ನೀಡಬೇಕು.
- ಕಾರ್ಯಕರ್ತೆಯರಿಗೆ ಕೆಲಸ ಕಲಿಸುವುದನ್ನು ಮುಂದುವರೆಸಲು ಮತ್ತು ತಿಂಗಳ ಪ್ರಗತಿ ವರದಿಗಳ ಮೂಲಕ ಮಾಹಿತಿ ಸಂಗ್ರಹಿಸಲು ಅವರು ತಿಂಗಳಿಗೆ ಒಂದು ವಲಯದ ಸಭೆಯನ್ನು ವಲಯದ ಎಲ್ಲಾ ಅಂಗನವಾಡಿ ಕಾರ್ಯಕರ್ತೆಯರೊಂದಿಗೆ ನಡೆಸಬೇಕು ಎಂದು ನಿರೀಕ್ಷಿಸಲಾಗುತ್ತದೆ.

- ನಿರ್ದಿಷ್ಟ ವಿಷಯಗಳ ಮೇಲೆ ತಾಯಂದಿರು, ಮಹಿಳಾ ಮಂಡಲ್‌ಗಳು ಮತ್ತು ಸಮುದಾಯದ ಸಭೆಗಳನ್ನು ಆಯೋಜಿಸುವುದು.

ಕೆಲವು ಅಂಗನವಾಡಿಗಳು ಬಸ್ಸಿನ ಮಾರ್ಗದಲ್ಲಿಯೇ ಇರುತ್ತವೆ, ಅಂದರೆ ಗ್ರಾಮದ ಮುಖ್ಯ ರಸ್ತೆಯಲ್ಲಿಯೇ ಇರುತ್ತವೆ. ಅಲ್ಲಿಗೆ ಬಸ್ಸ್ ನ ಮೂಲಕ ತಲುಪಬಹುದು. ಕೆಲವು ಅಂಗನವಾಡಿಗಳು ಸ್ವಲ್ಪ ಊರಿನ ಒಳಭಾಗದಲ್ಲಿ ಇದ್ದರೆ, ಇನ್ನೂ ಕೆಲವು ತೀರಾ ಒಳಪ್ರದೇಶಗಳಲ್ಲಿರುತ್ತವೆ. ಸಾಮಾನ್ಯವಾಗಿ ಅಲ್ಲಿ ಹೋಗಲು ಹಲವಾರು ಕಿ.ಮಿ.ಗಳ ದೂರ ಕಚ್ಚಾ ರಸ್ತೆಗಳಲ್ಲಿ ನಡೆಯಬೇಕಾಗುತ್ತದೆ. ಮೇಲುಸ್ತುವಾರಿ ಅಧಿಕಾರಿಗಳು ತಾವು ಕೇವಲ ಮುಖ್ಯ ರಸ್ತೆಯಲ್ಲಿರುವ ಅಂಗನವಾಡಿಗಳನ್ನು ಮಾತ್ರವಲ್ಲದೆ ಎಲ್ಲಾ ಅಂಗನವಾಡಿಗಳನ್ನೂ ಭೇಟಿ ಮಾಡುತ್ತಿದ್ದಾರೆ ಎಂದು ಖಚಿತಪಡಿಸಿಕೊಳ್ಳಬೇಕು. ಪ್ರತಿ ದಿನ ತಾವು ಯಾವ ಅಂಗನವಾಡಿಯನ್ನು ಭೇಟಿ ಮಾಡಬೇಕು ಎನ್ನುವುದನ್ನು ತಾವೇ ನಿಶ್ಚಯಿಸಬೇಕು. ಅವರ ಯೋಜನೆ ಹೀಗೆ ಇರಬಹುದು.

| **ಅಂಗನವಾಡಿಯ ಹೆಸರು** | **ಭೇಟಿಯ ತಾರೀಖು** |
|---|---|
| 1. ಮಾದಿಪುರ | 8.7.95 |
| 2. ಭೋಕ್ರಾ ಗಾಂವ್ | 9.7.95<br>(ರಾತ್ರಿ ಉಳಿದುಕೊಳ್ಳುವುದು) |
| 3. ಉಜ್ಜಿನ | 10.7.95<br>(ಭೋಕ್ರಾದಿಂದ ಹಿಂದಿರುಗುವಾಗ) |

**ಅಂಗನವಾಡಿಯಲ್ಲಿ ಪರಿವೀಕ್ಷಣೆಗಳು**

ಅಂಗನವಾಡಿಯಲ್ಲಿ ಒಬ್ಬ ಮೇಲುಸ್ತುವಾರಿ ಅಧಿಕಾರಿ ಅಲ್ಲಿನ ಅಂಗನವಾಡಿ ಕಾರ್ಯಕರ್ತೆಯ ಕೆಲಸವನ್ನು ಗಮನಿಸುತ್ತಾರೆ. ಕಾರ್ಯಕರ್ತೆಯು ಶಾಲಾಪೂರ್ವ ಚಟುವಟಿಕೆಗಳನ್ನು ನಡೆಸುವಾಗ ಈಕೆ ಅದನ್ನು ಗಮನವಿಟ್ಟು ವೀಕ್ಷಿಸುತ್ತಾರೆ; ಆ ದಿನ ಕಾರ್ಯಕರ್ತೆ ಮನೆಭೇಟಿಗೆ ತೆರಳಿದಾಗ ಅವಳೊಂದಿಗೆ ಮೇಲುಸ್ತುವಾರಿ ಅಧಿಕಾರಿ ಕೂಡಾ ಇರುತ್ತಾರೆ; ಆ ದಿನ ಮಹಿಳಾ ಮಂಡಲ್‌ದ ಸಭೆ ಯೋಜಿಸಿದ್ದರೆ ಈಕೆಯೂ ಅದರಲ್ಲಿ ಪಾಲ್ಗೊಳ್ಳುತ್ತಾರೆ; ಕಾರ್ಯಕರ್ತೆ ಮಕ್ಕಳ ತೂಕ ಮಾಡುವುದನ್ನು ಮತ್ತು ತೂಕವಾದ ನಂತರ ತಾಯಂದಿರೊಂದಿಗೆ ಸಂಭಾಷಣೆ ನಡೆಸುವುದನ್ನು ಗಮನಿಸುತ್ತಾರೆ; ಮೇಲುಸ್ತುವಾರಿ ಅಧಿಕಾರಿ ಅವರ ವೀಕ್ಷಣೆಗಳನ್ನು ಗುರುತು ಮಾಡಿಕೊಳ್ಳುತ್ತಾರೆ ಮತ್ತು ಕಾರ್ಯಕರ್ತೆಯು ತನ್ನ ನಿತ್ಯದ ದಿನಚರಿ ಪುಸ್ತಕದಲ್ಲಿ ದಾಖಲಿಸಿರುವ ವಿವರಗಳು ಸರಿಯಾಗಿವೆಯೆ ಎಂದು ಪರಿಶೀಲಿಸುತ್ತಾರೆ. ಕಾರ್ಯಕರ್ತೆಯಲ್ಲಿ ಕಂಡ ಎಲ್ಲ ಒಳ್ಳೆಯ ಅಂಶಗಳಿಗೆ ಮೆಚ್ಚುಗೆ ವ್ಯಕ್ತಪಡಿಸುತ್ತಾರೆ ಮತ್ತು ಸುಧಾರಣೆಗಳನ್ನು (ಅಗತ್ಯ ಬಿದ್ದಲ್ಲಿ) ಮಾಡಬಹುದಾದ ರೀತಿಗಳನ್ನು

ಚರ್ಚಿಸುತ್ತಾರೆ. ತನ್ನ ಗಮನಕ್ಕೆ ಬಂದ ಅಂಶಗಳನ್ನು ಅವರು ಅಂಗನವಾಡಿ ಕಾರ್ಯಕರ್ತೆಯೊಂದಿಗೆ ಚರ್ಚಿಸುತ್ತಾರೆ ಮತ್ತು ಸುಧಾರಣೆಗೆ ಸಲಹೆಗಳನ್ನು ನೀಡುತ್ತಾರೆ.

**ಅಂಗನವಾಡಿಯಲ್ಲಿ ಪ್ರಾತ್ಯಕ್ಷಿಕೆಗಳನ್ನು ನೀಡುವುದು**

ಅಂಗನವಾಡಿ ಕಾರ್ಯಕರ್ತೆಯು ಒಂದೊಮ್ಮೆ ಏನನ್ನಾದರೂ ಸರಿಯಾಗಿ ಮಾಡಲು ಅಸಮರ್ಥರಾಗಿದ್ದರೆ ಆ ಚಟುವಟಿಕೆಯನ್ನು ಹೇಗೆ ಮಾಡಬೇಕೆಂದು ಮೇಲುಸ್ತುವಾರಿ ಅಧಿಕಾರಿ ನಿದರ್ಶಿಸಿ ತೋರಿಸುತ್ತಾರೆ. ಉದಾಹರಣೆಗೆ, ಜಮೀಲಾ ಎಂಬ ಮೇಲುಸ್ತುವಾರಿ ಅಧಿಕಾರಿ ಉಜ್ಜನದ ಅಂಗನವಾಡಿಗೆ ಭೇಟಿ ನೀಡಿದಾಗ ಅಲ್ಲಿನ ಕಾರ್ಯಕರ್ತೆ ಕಥೆಯನ್ನು ಸರಿಯಾಗಿ ಹೇಳುತ್ತಿರಲಿಲ್ಲ ಎನ್ನುವುದು ಅವರ ಗಮನಕ್ಕೆ ಬಂತು. ಕಾರ್ಯಕರ್ತೆಯ ದನಿಯು ಭಾವನೆಗಳನ್ನು ಅಭಿವ್ಯಕ್ತಿಸುತ್ತಿರಲಿಲ್ಲ ಮತ್ತು ಆಕೆ ಕಥೆ ಹೇಳುವಾಗ ಮಕ್ಕಳನ್ನು ಆ ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳಲಿಲ್ಲ. ಆಗ ಜಮೀಲಾರವರೇ ಹಾವಭಾವಗಳು ಮತ್ತು ಶಬ್ದಗಳೊಂದಿಗೆ ಮಕ್ಕಳಿಗೆ ಆಸಕ್ತಿ ಹುಟ್ಟಿಸುವ ರೀತಿಯಲ್ಲಿ ಒಂದು ಕಥೆ ಹೇಳಲು ಮತ್ತು ಕಾರ್ಯಕರ್ತೆಗೆ ಕಥೆ ಹೇಳುವ ಸರಿಯಾದ ರೀತಿಯನ್ನು ಕಲಿಸಲು ನಿರ್ಧರಿಸುತ್ತಾರೆ. ಮಕ್ಕಳಿಗೆ ಆಸಕ್ತಿ ಹುಟ್ಟಿಸುವ ರೀತಿಯಲ್ಲಿ ಇತರ ಕೆಲವು ಕಥೆ ಹೇಳುವ ರೀತಿಗಳನ್ನು ಜಮೀಲಾರವರಿಗೆ ನೀವು ಸೂಚಿಸಬಹುದೆ? DECE-1 ರ ಘಟಕ 25ರಲ್ಲಿ ನೀವು ಇದರ ಬಗ್ಗೆ ಓದಿದ್ದೀರಿ.

**ದಾಖಲೆಗಳು ಮತ್ತು ರೆಜಿಸ್ಟರ್‌ಗಳನ್ನು ಪರಿಶೀಲಿಸುವುದು**

ತಮ್ಮ ಭೇಟಿಯ ವೇಳೆ ಮೇಲುಸ್ತುವಾರಿ ಅಧಿಕಾರಿ ಅವರು ಕಾರ್ಯಕರ್ತೆಯು ಇಡುವ ದಾಖಲೆಗಳು ಮತ್ತು ರೆಜಿಸ್ಟರ್‌ಗಳನ್ನು ಪರಿಶೀಲಿಸುತ್ತಾರೆ. ಉದಾಹರಣೆಗೆ, ದಾಸ್ತಾನು ರೆಜಿಸ್ಟರ್‌ನಲ್ಲಿ ದಾಖಲೆ ಮಾಡಿರುವುದನ್ನು ಮತ್ತು ದಿನಸಿಗಳು ಎಷ್ಟು ಖರ್ಚಾಗಿವೆ ಮತ್ತು ಉಳಿದಿದೆ ಎಂಬ ವಿವರಗಳನ್ನು ಅವರು ಪರಿಶೀಲಿಸುತ್ತಾರೆ. ವಾಸ್ತವವಾಗಿ ಉಳಿದಿರುವ ಆಹಾರ ದಿನಸಿಗಳನ್ನು ಮತ್ತು ದಾಸ್ತಾನು ರೆಜಿಸ್ಟರ್‌ನಲ್ಲಿ ದಾಖಲೆ ಮಾಡಿರುವುದನ್ನು ಆಕೆ ಹೋಲಿಸಿ ನೋಡುತ್ತಾರೆ. ಬೆಳವಣಿಗೆಯನ್ನು ದಾಖಲಿಸಿರುವ ರೆಜಿಸ್ಟರ್ ಅನ್ನು ನೋಡಿ ಕಾರ್ಯಕರ್ತೆಯರು ಮಕ್ಕಳ ತೂಕವನ್ನು ನಿಯಮಿತವಾಗಿ ಮತ್ತು ಸರಿಯಾಗಿ ಗುರುತು ಮಾಡಿಕೊಳ್ಳುತ್ತಿದ್ದಾರೆಯೆ ಎಂದು ಪರಿಶೀಲಿಸುತ್ತಾರೆ. ಮಕ್ಕಳು ಎಲ್ಲ ಪ್ರತಿರಕ್ಷಣೆ ಲಸಿಕೆಗಳನ್ನು ಹಾಕಿಸಿಕೊಂಡಿರುವರೆ ಇಲ್ಲವೆ ಎಂಬುದನ್ನೂ ನೋಡುತ್ತಾರೆ. ಈ ದಾಖಲೆಗಳು ಮತ್ತು ರೆಜಿಸ್ಟರ್‌ಗಳನ್ನು ಪುನರವಲೋಕನ ಮಾಡಿ ಪಡೆದ ಮಾಹಿತಿಯನ್ನು ನಂತರ ತಾನು ಸಾಧಿಸಬೇಕಾದ ಗುರಿಗಳನ್ನು ಯೋಜಿಸುವಾಗ ಮೇಲುಸ್ತುವಾರಿ ಅಧಿಕಾರಿಯು ಬಳಸಿಕೊಳ್ಳುತ್ತಾರೆ ಎಂದು ಓದಿದ್ದು ನೆನಪಿದೆಯೆ? ಉದಾಹರಣೆಗೆ, ಕಾರ್ಯಕರ್ತೆ ಬರೆದಿಡುತ್ತಿರುವ ಹಾಜರಾತಿ ಪುಸ್ತಕವನ್ನು ಪರಿಶೀಲಿಸಿದಾಗ ಶಾಲಾಪೂರ್ವ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ಕೇವಲ 20 ಮಕ್ಕಳು ಮಾತ್ರ ಬರುತ್ತಿರುವುದು ಜಮೀಲಾರವರಿಗೆ ಗೊತ್ತಾಯಿತು. ಆದರೆ ಹಾಜರಿ ರೆಜಿಸ್ಟರ್‌ನಲ್ಲಿ 40 ಮಕ್ಕಳ ಹೆಸರುಗಳು ದಾಖಲಾಗಿತ್ತು. ಆ 20 ಮಕ್ಕಳೂ ಸರಿಯಾಗಿ ದಿನವೂ ಬರುತ್ತಿರಲಿಲ್ಲ. ಅದಕ್ಕೆ ಕಾರಣವೇನೆಂಬುದನ್ನು ಜಮೀಲಾರವರು ಕಾರ್ಯಕರ್ತೆಯ ನಿತ್ಯದ ದಿನಚರಿ ಪುಸ್ತಕದಲ್ಲಿ ಕಂಡುಕೊಂಡರು.

ಕಾರ್ಯಕರ್ತೆಯು ನಿತ್ಯವೂ ಒಂದೇ ರೀತಿಯ ಚಟುವಟಿಕೆಗಳನ್ನು ಮಾಡಿಸುತ್ತಿದ್ದಳು. ಆಕೆ ಸ್ವಾರಸ್ಯಕರವಾದ ಯಾವುದೇ ಸಹಾಯಕ ಸಾಧನಗಳಾಗಲಿ ಅಥವಾ ನಲಿಕಲಿ ವಿಧಾನಗಳಾಗಲಿ ಬಳಸುತ್ತಿರಲಿಲ್ಲ, ಬದಲಿಗೆ ಸಂಖ್ಯೆಗಳು, ಅಕ್ಷರಗಳು ಇವುಗಳನ್ನು ಮಾತ್ರ ಕಲಿಸುವುದರ ಮೇಲೆ ಗಮನ ಕೇಂದ್ರಿಸಿದ್ದರು. ಈ ಕಾರ್ಯಕರ್ತೆಗೆ ವಿವಿಧ ಚಟುವಟಿಕೆಗಳ ಬಗ್ಗೆ, ಮತ್ತು ಕಲಿಕೆಯನ್ನು ಸ್ವಾರಸ್ಯಗೊಳಿಸಲು ನಲಿಕಲಿ ವಿಧಾನವನ್ನು ಬಳಸುವುದರ ಬಗ್ಗೆ, ಜೊತೆಗೆ ಸುತ್ತಲ ಪರಿಸರದಲ್ಲಿ ಲಭ್ಯವಾಗುವ ಸಾಮಗ್ರಿಗಳನ್ನು ಬೋಧನೆಗೆ ಬಳಸುವುದರ ಬಗ್ಗೆ  ತಿಳಿದುಕೊಳ್ಳುವ ಅಗತ್ಯವಿದೆ ಎಂದು ಜಮೀಲಾರವರಿಗೆ ಅರ್ಥವಾಯಿತು.  ಆದ್ದರಿಂದ ಅಂಗನವಾಡಿ ಕಾರ್ಯಕರ್ತೆಯರಿಗೆ ಈ ನಿಟ್ಟಿನಲ್ಲಿ ಶಿಕ್ಷಣ ಮತ್ತು ತರಬೇತಿ ನೀಡುವುದು ಜಮೀಲಾರವರ ಸಧ್ಯದ  ಒಂದು ಗುರಿಯಾಯಿತು.

**ಕಾರ್ಯಕರ್ತೆಯರ ಕೌಶಲಗಳನ್ನು ಹೆಚ್ಚಿಸಲು ತರಬೇತಿ ಕಾರ್ಯಕ್ರಮಗಳನ್ನು ಆಯೋಜಿಸುವುದು**

ಸುಮಾರಷ್ಟು ಅಂಗನವಾಡಿ ಕಾರ್ಯರ್ತೆಯರಿಗೆ ಕಥೆ ಹೇಳುವುದು ಮತ್ತು ಬೆಳವಣಿಗೆಯ ನಕ್ಷೆಗಳ ಮೇಲೆ ತೂಕಗಳನ್ನು ಗುರುತು ಮಾಡುವಂತಹ ಚಟುವಟಿಕೆಗಳನ್ನು ಮಾಡಲು ಅಸಮರ್ಥರಾಗಿದ್ದಾರೆಂದು ಮೇಲುಸ್ತುವಾರಿ ಅಧಿಕಾರಿಗೆ ಅನಿಸಿದರೆ ಅವರು ಈ ವಿಷಯಗಳನ್ನು ಚರ್ಚಿಸಲು ಒಂದು ವಲಯದ ಸಭೆಯನ್ನು ಆಯೋಜಿಸುತ್ತಾರೆ. ಈ ಸಭೆಯಲ್ಲಿ ತಮ್ಮ ನಿದರ್ಶನದ ನಂತರ ಕಾರ್ಯಕರ್ತೆಯರು ಕೌಶಲ್ಯಗಳನ್ನು ಅಭ್ಯಾಸ ಮಾಡುವಂತೆ ಮಾಡಿ ಅವರು ಅದರಲ್ಲಿ ಪರಿಣತರಾಗುವಂತೆ ಮಾಡುತ್ತಾರೆ.

**ಸಮುದಾಯವನ್ನು ಭೇಟಿ ಮಾಡುವುದು**

ಮೇಲುಸ್ತುವಾರಿ ಅಧಿಕಾರಿ ಮನೆ ಭೇಟಿಗಳ ದಿನಚರಿ ಪುಸ್ತಕವನ್ನು ಪರಿಶೀಲಿಸುತ್ತಾರೆ ಮತ್ತು ನಂತರ ಆ ದಿನ ಯೋಜಿಸಿಲಾದ ಮನೆ ಭೇಟಿಗಳಿಗೆ ಕಾರ್ಯಕರ್ತೆಯೊಂದಿಗೆ ಹೋಗುತ್ತಾರೆ. ಗ್ರಾಮಸ್ಥರನ್ನು ಭೇಟಿ ಮಾಡಿ ಅವರಿಗೆ ಐಸಿಡಿಎಸ್ ಯೋಜನೆಯ ಬಗ್ಗೆ ವಿವರಿಸಲು ಅವರಿಗೆ ಇದೊಂದು ಒಳ್ಳೆಯ ಅವಕಾಶವಾಗುತ್ತದೆ. ಅಲ್ಲಿ ನಡೆಯುವ ಅನೌಪಚಾರಿಕ ಚರ್ಚೆಗಳ ಮೂಲಕ ಕಾರ್ಯಕರ್ತೆಯು ಅಲ್ಲಿ ಸೇವೆಗಳನ್ನು ಸರಿಯಾಗಿ ತಲುಪಿಸುತ್ತಿರುವರೇ ಎಂಬುದನ್ನು ತಿಳಿದುಕೊಳ್ಳಲು ಅವರಿಗೆ ನೆರವಾಗುತ್ತದೆ. ಕಾರ್ಯಕರ್ತೆಯು ಅಂಗನವಾಡಿಯನ್ನು ಸರಿಯಾದ ಸಮಯಕ್ಕೆ ತೆರಯುತ್ತಾರೆಯೆ, ಮಕ್ಕಳಿಗೆ ಸರಿಯಾದ ಪ್ರಮಾಣದಲ್ಲಿ ಆಹಾರ ಪೂರೈಕೆ ನೀಡುತ್ತಿದ್ದಾರೆಯೆ, ಆಕೆ ದಿನಚರಿಯಲ್ಲಿ ಬರೆದದ್ದನ್ನು ನಿಜವಾಗಿಯೂ ಮಾಡಿರುತ್ತಾರೆಯೆ ಎಂಬ ಸಂಗತಿಗಳನ್ನು ಅವರು ತಿಳಿದುಕೊಳ್ಳಬಹುದು. ಜನರ ಆರೋಗ್ಯದ ಮೌಲ್ಯಮಾಪನ ಮಾಡುತ್ತಾರೆ, ಅಥವಾ ಮತ್ತೀನ್ನೇನಾದರೂ ಸಮಸ್ಯೆಗಳಿದ್ದರೆ ಅವುಗಳನ್ನೂ ಕೇಳಿ ತಾಯಂದಿರು/ಮಹಿಳಾ ಮಂಡಲ್/ಸಮುದಾಯದ ಮುಂದಿನ ಸಭೆಯಲ್ಲಿ ಚರ್ಚಿಸಬೇಕಾದ ವಿಷಯವನ್ನು

ಯ್ಕೆ ಮಾಡಲು ಅಂಗನವಾಡಿ ಕಾರ್ಯಕರ್ತೆಗೆ ಮಾರ್ಗದರ್ಶನ ನೀಡುತ್ತಾರೆ, ಅಥವಾ ಜಾಗೃತಿ ಆಂದೋಲನವನ್ನು ಹಮ್ಮಿಕೊಳ್ಳಲು ಸಲಹೆ ನೀಡುತ್ತಾರೆ.

## 19.10 ಸಮುದಾಯದ ಬೆಂಬಲ ಪಡೆಯುವುದು

ಐಸಿಡಿಎಸ್ ಯೋಜನೆಯು ಪರಿಣಾಮಕಾರಿಯಾಗಿರಬೇಕಾದರೆ ಯೋಜನಾಕ್ಷೇತ್ರದ ಜನರ ಬೆಂಬಲವಿರುವುದು ಅತ್ಯಗತ್ಯ. ನೀವು ನೋಡಿದ ಹಾಗೆ ಸಿಡಿಪಿಓ ಮತ್ತು ಮೇಲುಸ್ತುವಾರಿ ಅಧಿಕಾರಿಗಳು ಜನರನ್ನು ಭೇಟಿ ಮಾಡಿ ಯೋಜನೆಯ ಬಗ್ಗೆ ತಿಳಿಸಿ ಅಂಗನವಾಡಿ ಕಾರ್ಯಕರ್ತೆಯನ್ನು ಆರಿಸುವಂತೆ ಕೇಳಿಕೊಳ್ಳುವ ಸಮಯದಿಂದಲೇ ಸಮುದಾಯವು ಐಸಿಡಿಎಸ್ ಯೋಜನೆಯಲ್ಲಿ ಆರಂಭದಿಂದಲೇ ತೊಡಗಿಸಿಕೊಳ್ಳುತ್ತದೆ. ಕಾರ್ಯಕರ್ತೆಯೂ ತನ್ನ ತರಬೇತಿ ಮುಗಿದ ನಂತರ ಈ ಕೆಳಗಿನ ರೀತಿಗಳಲ್ಲಿ ಸಮುದಾಯವನ್ನು ಭೇಟಿ ಮಾಡುತ್ತಾರೆ:

- ಸಮುದಾಯ ಸಭೆಗಳು
- ತಾಯಂದಿರ ಸಭೆಗಳು
- ಮಹಿಳಾ ಮಂಡಲ್ ಸಭೆಗಳು
- ಮನೆ ಭೇಟಿಗಳು
- ಗ್ರಾಮದ ನಲ್ಲಿಯ ಬಳಿ ಅಥವಾ ಧಾರ್ಮಿಕ ಸಮಾರಂಭಗಳಲ್ಲಿ ಅನೌಪಚಾರಿಕ ಮಾತುಕತೆ ಇತ್ಯಾದಿ
- ತಾಯಂದಿರು ಅಂಗನವಾಡಿಗೆ ಬಂದಾಗ

ಸಮುದಾಯವನ್ನು ಒಳಗೊಳ್ಳುವುದು ಐಸಿಡಿಎಸ್ ಯೋಜನೆಯ ಒಂದು ಮುಖ್ಯವಾದ ಭಾಗವಾಗಿದೆ. ಏಕೆಂದರೆ ಜನರು ತಮ್ಮ ಸ್ವಂತದ ಅಭಿವೃದ್ಧಿಯ ಜವಾಬ್ದಾರಿಯನ್ನು ಹೊತ್ತುಕೊಳ್ಳಬೇಕು. ಐಸಿಡಿಎಸ್ ಸೇವೆಗಳು ಗ್ರಾಮದ ಮಕ್ಕಳು ಮತ್ತು ಮಹಿಳೆಯರ ಉಳಿವಿಗೆ ಸಹಾಯ ಮಾಡುತ್ತದೆ ಎನ್ನುವುದನ್ನು ಅವರು ಅರ್ಥ ಮಾಡಿಕೊಳ್ಳಬೇಕು. ಆದ್ದರಿಂದ, ಐಸಿಡಿಎಸ್ ಯೋಜನೆಯು ಒಂದು ಸರ್ಕಾರಿ ಯೋಜನೆ, ತಾವು ಫಲನುಭವಿಗಳು ಮಾತ್ರ, ಪ್ರತಿಫಲವಾಗಿ ತಾವು ಏನನ್ನೂ ಕೊಡಬೇಕಾದ್ದಿಲ್ಲ ಎಂದು ಅವರು ಅಂದುಕೊಳ್ಳಬಾರದು. ಜನ ಹಣ ಸಂದಾಯದ ಮೂಲಕ ಪಾಲ್ಗೊಳ್ಳಬೇಕೆಂದಿಲ್ಲ; ಈ ಕೆಳಗಿನ ಅನೇಕ ವಿಧಗಳಲ್ಲಿ ಅವರು ಪಾಲ್ಗೊಳ್ಳಬಹುದು:

- ತಮ್ಮ ಮಕ್ಕಳನ್ನು ಸರಿಯಾದ ಸಮಯಕ್ಕೆ ಅಂಗನವಾಡಿಗೆ ಕಳುಹಿಸುವುದು
- ಲಸಿಕೆ ಹಾಕುವ ಕಾರ್ಯಕ್ರಮ, ಆರೋಗ್ಯ ತಪಾಸಣೆ ಅಥವಾ ಬೆಳವಣಿಗೆಯನ್ನು ಮಾಪನ ಮಾಡುವ ದಿನಗಳಲ್ಲಿ ಅಂಗನವಾಡಿಯನ್ನು ನಡೆಸಲು ಅಂಗನವಾಡಿ ಕಾರ್ಯಕರ್ತೆಗೆ ಸಹಾಯ ಮಾಡುವುದು
- ಸಮುದಾಯದ ಇತರ ಮಹಿಳೆಯರು ಮತ್ತು ಜನರೊಂದಿಗೆ ಮಾತನಾಡುವುದು
- ಮಕ್ಕಳಿಗೆ ನೀಡುವ ಪೂರಕ ಪೌಷ್ಠಿಕ ಆಹಾರವನ್ನು ತಯಾರಿಸಲು ತರಕಾರಿಗಳು, ಮಸಾಲೆ ಇತ್ಯಾದಿಗಳನ್ನು ಒದಗಿಸುವುದು

- ಮಕ್ಕಳನ್ನು ನೋಡಿಕೊಳ್ಳುವ ಉತ್ತಮ ರೀತಿಗಳು, ಅವರಿಗೆ ಸರಿಯಾದ ಆಹಾರ ಕೊಡುವುದು, ಸೂಕ್ತ ಸಮಯದಲ್ಲಿ ಲಸಿಕೆ ಹಾಕಿಸುವುದು ಮತ್ತು ಮಕ್ಕಳೊಂದಿಗೆ ಆಟವಾಡುವುದು ಮುಂತಾದವುಗಳ ಬಗ್ಗೆ ಇತರ ತಾಯಂದಿರು ಮತ್ತು ಮಹಿಳೆಯರಿಗೆ ತಿಳುವಳಿಕೆ ನೀಡುವುದು
- ಅಂಗನವಾಡಿಗೆ ಬೇಕಾಗುವ ಆಟದ ಸಾಮಾನುಗಳನ್ನು ಸಂಗ್ರಹಿಸಲು ಮತ್ತು ಅಲ್ಲಿ ಲಭ್ಯವಿರುವ ಆಟದ ಸಾಮಾನುಗಳು ಹಾಳಾಗಿದ್ದರೆ ಅವುಗಳನ್ನು ಸರಿಪಡಿಸಲು ಸಹಾಯ ಮಾಡುವುದು

DECE-1 ರ 25 ನೇ ಘಟಕದಲ್ಲಿ ನೀವು ಕುಟುಂಬ ಮತ್ತು ಸಮುದಾಯವನ್ನು ಹೇಗೆ ಒಳಗೊಳ್ಳಬಹುದು ಎಂಬುದನ್ನು ಸಾಕಷ್ಟು ವಿವರವಾಗಿ ಅಧ್ಯಯನ ಮಾಡಿದ್ದೀರಿ. ಆ ವಿಷಯಗಳನ್ನು ಈಗ ನೆನಪು ಮಾಡಿಕೊಳ್ಳುವಿರಾ? ಈ ಮೇಲೆ ಪಟ್ಟಿಮಾಡಲಾದ ರೀತಿಗಳ ಹೊರತಾಗಿ, ಅಂಗನವಾಡಿಯ ಚಟುವಟಿಕೆಗಳಲ್ಲಿ ಸಮುದಾಯವು ಪಾಲ್ಗೊಳ್ಳಲು ಇನ್ನೂ ಯಾವ ಯಾವ ವಿಧಗಳಿರಬಹುದು ಎಂಬುದನ್ನು ಕುರಿತು ಯೋಚಿಸಿ. ಈ ಕೆಳಗಿನ ಜಾಗದಲ್ಲಿ ಕನಿಷ್ಠ ಐದು ವಿಧಗಳನ್ನು ಪಟ್ಟಿ ಮಾಡಿ.

-----------------------------------------------------------------------------------

-----------------------------------------------------------------------------------

-----------------------------------------------------------------------------------

-----------------------------------------------------------------------------------

-----------------------------------------------------------------------------------

-----------------------------------------------------------------------------------

-----------------------------------------------------------------------------------

## ನಿಮ್ಮ ಪ್ರಗತಿಯನ್ನು ಪರಿಶೀಲಿಸಿಕೊಳ್ಳಿ: ಅಭ್ಯಾಸ ಚಟುವಟಿಕೆ 4

1. ಕಾಲಂ A ಯಲ್ಲಿ ಕೊಟ್ಟ ದಾಖಲೆಗಳಿಗೆ ಕಾಲಂ B ಯಲ್ಲಿ ಕೊಟ್ಟ ಮಾಹಿತಿಗಳೊಂದಿಗೆ ಹೊಂದಿಸಿರಿ.

| ಕಾಲಂ A | ಕಾಲಂ B |
|---|---|
| i. ಶಾಲಾಪೂರ್ವ ಹಾಜರಾತಿ ರೆಜಿಸ್ಟರ್ | a. ಮಕ್ಕಳ ತೂಕದ ವಿವರ ಮತ್ತು ಅವರ ಬೆಳವಣಿಗೆಯ ವಿನ್ಯಾಸ |
| ii. ಲಸಿಕೆಯ ರೆಜಿಸ್ಟರ್ | b. ಗರ್ಭಿಣಿ ಮತ್ತು ಬಾಣಂತಿಯರಿಗೆ ಲಭ್ಯವಾಗುವ ಪೂರಕವಾದ ಆಹಾರ |
| iii. ಬೆಳವಣಿಗೆ ನಕ್ಷೆಯ ರೆಜಿಸ್ಟರ್ | c. ಶಾಲಾಪೂರ್ವ ತರಗತಿಗಳಿಗೆ ಹಾಜರಾಗುವ 3-4 ವರ್ಷದ ಮಕ್ಕಳು |
| iv. ಗರ್ಭಿಣಿ ಮತ್ತು | d. ಮಕ್ಕಳು ಮತ್ತು ಮಹಿಳೆಯರ |

| | |
|---|---|
| ಬಾಣಂತಿಯರಿಗೆ ಒದಗಿಸುವ ಸೇವೆಗಳು | ಸ್ಥಿತಿ |
| v. ಸಮೀಕ್ಷೆಯ ರೆಜಿಸ್ಟರ್ | e. ಲಸಿಕೆ ಹಾಕಿಸಿಕೊಂಡ ಮಕ್ಕಳು ಮತ್ತು ತಾಯಂದಿರು, ಹಾಗೂ ಲಸಿಕೆಯ ಡೋಸ್ |
| vi. ಆಹಾರ ದಾಸ್ತಾನು ರೆಜಿಸ್ಟರ್ | f. ದಿನಸಿಗಳ ದಾಸ್ತಾನು |
| | g. ಸಮುದಾಯದ ಜನಸಂಖ್ಯೆ ಮತ್ತು ಜನರ ಕುಟುಂಬಗಳ ವಿವರಗಳು |

2. ಬಿಟ್ಟ ಸ್ಥಳ ತುಂಬಿರಿ:

i. ಅಂಗನವಾಡಿ ಕಾರ್ಯಕರ್ತೆಯು ಮಹಿಳಾ ಮಂಡಲ್‌ದ ಸಭೆಯ ರೆಜಿಸ್ಟರ್‌ನಲ್ಲಿ ------------------------------------------------------------------ ದಾಖಲಿಸುತ್ತಾಳೆ.

ii. ನಿತ್ಯದ ದಿನಚರಿ ಪುಸ್ತಕವು ಕಾರ್ಯಕರ್ತೆಯ ------------------------------ --------------------------- ದಾಖಲಿಸುವ ಪುಸ್ತಕವಾಗಿದೆ.

iii. ಆಹಾರ ದಾಸ್ತಾನಿನ ರೆಜಿಸ್ಟರ್ ಒಳಗೊಳ್ಳುವ ವಿವರಗಳು -------------------- ---------------------------------------------------------------------- ----------

iv. ಕುರಿಯರಿಕೆ ಸೇವಾ ರೆಜಿಸ್ಟರ್ ಒಳಗೊಳ್ಳುವ ವಿವರಗಳು --------------------- ---------------------------------------------------------------------- ----------

## 19.11 ಐಸಿಡಿಎಸ್ ಯೋಜನೆಯ ಬಡ್ಜೆಟ್ಟು

ತನ್ನ ಯೋಜನೆಗೆ ಬಡ್ಜೆಟ್ಟನ್ನು ತಯಾರಿಸುವ ಮತ್ತು ಸೇವೆಗಳ ಖರ್ಚುವೆಚ್ಚವನ್ನು ಈ ಬಡ್ಜೆಟ್ಟಿನೊಳಗೆ ಭರಿಸುವ ಹೊಣೆ ಸಿಡಿಪಿಒ ದ್ದಾಗಿರುತ್ತದೆ. ಸಿಡಿಪಿಒ ತಯಾರಿಸುವ ಬಡ್ಜೆಟ್ಟು ರಾಜ್ಯದ ಐಸಿಡಿಎಸ್ ಇಲಾಖೆಯಿಂದ ಹೊರಬಂದ ಮಾರ್ಗಸೂಚಿಗಳಿಗೆ ಅನುಗುಣವಾಗಿರುತ್ತದೆ. ಬಡ್ಜೆಟ್ಟು ಈ ಕೆಳಗಿನ ಅಂಶಗಳನ್ನು ಒಳಗೊಳ್ಳುತ್ತದೆ:

a. ಸಿಬ್ಬಂದಿಗಳ ವೇತನ
ಸಿಡಿಪಿಒ
ಸಹಾಯಕ ಸಿಡಿಪಿಒ
ಮೇಲುಸ್ತುವಾರಿ ಅಧಿಕಾರಿಗಳು

ಇದು ರಾಜ್ಯದಿಂದ ರಾಜ್ಯಕ್ಕೆ ಭಿನ್ನವಾಗಿರುತ್ತದೆ.

b. ಅಂಗನವಾಡಿ ಕಾರ್ಯಕರ್ತೆಯರ ಗೌರವಧನ
ಈ ಗೌರವಧನವು ಅಂಗನವಾಡಿ ಕಾರ್ಯಕರ್ತೆಯರ ವಿದ್ಯಾರ್ಹತೆ ಮತ್ತು ಸೇವಾವಧಿಯನ್ನು ಅವಲಂಬಿಸಿರುತ್ತದೆ.

c. ಅಂಗನವಾಡಿ ಸಹಾಯಕರ ಗೌರವಧನ

d. ಕಾರ್ಯನಿರ್ವಾಹಕರು ಮತ್ತು ಇತರ ಸಿಬ್ಬಂದಿಯ ವೇತನ
ಗುಮಾಸ್ತ - ಟೈಪಿಸ್ಟ್
ವಾಹನ ಚಾಲಕ
ಸೇವಕ
ಸಂಖ್ಯಾಶಾಸ್ತ್ರೀಯ ಸಹಾಯಕ

e. ಪುನರಾವರ್ತಿತ ವೆಚ್ಚವು ಪದೇ ಪದೇ ಭರಿಸುವ ಖರ್ಚುವೆಚ್ಚಗಳನ್ನು ಒಳಗೊಂಡಿರುತ್ತದೆ. ಅಂತಹ ಕೆಲವು ಖರ್ಚುವೆಚ್ಚಗಳು ಇಂತಿವೆ:

- ಅಂಗನವಾಡಿ ಕೇಂದ್ರಗಳಿಗೆ ಸಾದಿಲ್ವಾರು ವೆಚ್ಚ, ಅಂದರೆಅಂಗನವಾಡಿಯಲ್ಲಿ ರೆಜಿಸ್ಟರ್‌ಗಳನ್ನು ಕೊಳ್ಳಲು, ಶಾಪಾಪೂರ್ವ ಚಟುವಟಿಕೆಗಳಿಗೆ ಬೇಕಾಗಬಹುದಾದ ಸಾಮಗ್ರಿಗಳನ್ನು ಕೊಳ್ಳಲು ಆಗುವ ವೆಚ್ಚ.
- ಅಂಗನವಾಡಿಗಳಲ್ಲಿ ಸಾಧನ ಸಾಮಗ್ರಿಗಳನ್ನು ದುರಸ್ತಾಗಿಟ್ಟಿರಲು ಅಥವಾ ಬದಲಿಗೆಂದು ಬೇಕಾಗುವ ಹಣ
- ಅಂಗನವಾಡಿ ಕೇಂದ್ರಗಳ ಬಾಡಿಗೆ. ಹೆಚ್ಚಿನ ಅಂಗನವಾಡಿ ಕಟ್ಟಡಗಳನ್ನು ಬಾಡಿಗೆಗೆ ತೆಗೆದುಕೊಳ್ಳಲಾಗಿರುತ್ತವೆ. ಬಾಡಿಗೆಗೆಂದು ಹಣವು ಮೀಸಲಾಗಿಟ್ಟಿರುತ್ತದೆ, ಅದು ರಾಜ್ಯದಿಂದ ರಾಜ್ಯಕ್ಕೆ ಭಿನ್ನವಾಗಿರುತ್ತದೆ ಮತ್ತು ನಗರ, ಗ್ರಾಮೀಣ, ಬುಡಕಟ್ಟು ಪ್ರದೇಶಗಳಿಗೆ ಅನುಸಾರವಾಗಿಯೂ ಭಿನ್ನವಾಗಿರುತ್ತದೆ.
- ಪ್ರಥಮ ಚಿಕಿತ್ಸಾ ಪೆಟ್ಟಿಗೆಗೆ ಬೇಕಾಗುವ ಔಷಧಗಳ ವೆಚ್ಚ.
- ಜೀಪಿಗೆ ಇಂಧನದ ವೆಚ್ಚ.
- ಸಿಡಿಪಿಒ ಕಛೇರಿಯ ಲೇಖನ ಸಾಮಗ್ರಿಗಳು ಮುಂತಾದವುಗಳಿಗೆ ಬೇಕಾಗುವ ಸಾದಿಲ್ವಾರು ಹಣ.

f. ಪುನರಾವರ್ತಿತವಾಗದ ಖರ್ಚುವೆಚ್ಚ
ಯೋಜನೆಯ ಆರಂಭದಲ್ಲಿ ಕೆಳಗೆ ನೀಡಿರುವಂತಹ ಸಾಮಾನುಗಳಿಗೆ ಒಂದು ಸಲ ಮಾಡುವ ಖರೀದಿಯ ಖರ್ಚು:

- ಅಂಗನವಾಡಿಗೆ ಬೇಕಾಗುವ ಸಾಮಾನುಗಳು, ಉದಾಹರಣೆಗೆ ಅಡುಗೆ ಅಡುಕಲಗಳು, ತಟ್ಟೆ, ಪಾತ್ರೆಗಳು ಇತ್ಯಾದಿ.
- ಬ್ಲಾಕ್ ಕಛೇರಿಯ ಪೀಠೋಪಕರಣ
- ಫ್ರಿಜ್
- ಸಿಡಿಪಿಒ ರವರ ಜೀಪು

ಪ್ರತೀ ಯೋಜನೆಯ ಬಡ್ಜೆಟ್ಟು ಆ ಯೋಜನೆಯ ಅಡಿಯಲ್ಲಿ ಬರುವ ಅಂಗನವಾಡಿ ಕೇಂದ್ರಗಳ ಸಂಖ್ಯೆ, ಅಂಗನವಾಡಿ ಕಾರ್ಯಕರ್ತೆಯರು ಮತ್ತು ಸಹಾಯಕರ ಸಂಖ್ಯೆ, ಹೊಸ ಕೇಂದ್ರಗಳ ಆರಂಭಕ್ಕೆ ಬೇಕಾಗುವ ಸಾಮಾನು-ಸರಂಜಾಮುಗಳು ಹೀಗೆ ಇವೆಲ್ಲವನ್ನೂ ಆಧರಿಸಿರುತ್ತದೆ. ಈ ಮೇಲಿನ ಸಂಗತಿಗಳಿಗೆಂದು ಯೋಜಿಸಿದ ಬಡ್ಜೆಟ್ಟನ್ನು ಅನ್ನು ಆಧರಿಸಿ ಸಿಡಿಪಿಒ ಹಣವನ್ನು ತೆಗೆಯುತ್ತಾರೆ ಮತ್ತು ಆ ಹಣವು ಯೋಜಿಸಿದ ಕೆಲಸಗಳಿಗೆ ಯೋಗ್ಯವಾಗಿ ವಿನಿಯೋಗವಾಗುವುದಕ್ಕೆ ಹೊಣೆಗಾರರಾಗಿರುತ್ತಾರೆ.

ಐಸಿಡಿಎಸ್ ಬಡ್ಜೆಟ್ಟಿನ ದೊಡ್ಡ ಪ್ರಮಾಣವು ಪೂರಕ ಪೌಷ್ಠಿಕ ಆಹಾರದ ಖರೀದಿಗೆಂದು ಮೀಸಲಾಗಿರುತ್ತದೆ. ಈ ಖರ್ಚುವೆಚ್ಚವನ್ನು ಹೆಚ್ಚಿನದಾಗಿ ರಾಜ್ಯ ಇಲಾಖೆ ಅಥವಾ ಜಿಲ್ಲಾ ಮಟ್ಟದಲ್ಲಿ ಮಾಡಲಾಗುತ್ತದೆಯೇ ವಿನಾ ಸಿಡಿಪಿಒ ಯಿಂದಲ್ಲ.

ಐಸಿಡಿಎಸ್ ಯೋಜನೆಯ ಬಡ್ಜೆಟ್ಟಿನಲ್ಲಿ ಸ್ವಲ್ಪ ಭಾಗವನ್ನು ಆರೋಗ್ಯ ಸಿಬ್ಬಂದಿಗಳು ಮತ್ತು ಅದಕ್ಕೆ ಸಂಬಂಧಿಸಿದ ಮೂಲಸೌಕರ್ಯಗಳಿಗಾಗಿ ವ್ಯಯಿಸಲಾಗುತ್ತದೆ. ಏಕೆಂದರೆ ಈ ಯೋಜನೆಯ ನಾಲ್ಕು ಸೇವೆಗಳು ಆರೋಗ್ಯ ಸಂಬಂಧಿತವಾಗಿವೆ. ಅವು ಯಾವವು ಎಂದು ಪಟ್ಟಿ ಮಾಡುವಿರಾ? ಇದರ ಹಣವು ಐಸಿಡಿಎಸ್ ಯೋಜನೆಯಿಂದಲೇ ಬರುತ್ತದೆಯಾದರೂ ಅದನ್ನು ಸಿಡಿಪಿಒ ಭರಿಸುವುದಿಲ್ಲ, ಬದಲಿಗೆ ಅದನ್ನು ಆರೋಗ್ಯ ಇಲಾಖೆಗೆ ಕೊಡಲಾಗುತ್ತದೆ.

## 19.12 ಇತರ ಕ್ಷೇತ್ರಗಳಲ್ಲಿನ ಯೋಜನೆಗಳೊಂದಿಗೆ ಸಹಯೋಗ

ಐಸಿಡಿಎಸ್ ಯೋಜನೆಯು ಸರ್ಕಾರದ ಇತರ ಇಲಾಖೆಗಳ ಇತರ ಅನೇಕ ಯೋಜನೆಗಳೊಂದಿಗೆ ಕೆಲಸ ಮಾಡುತ್ತದೆ. ಈ ಅಂತರ್‌ವಿಭಾಗೀಯ ಸಹಯೋಗವು ಸಮುದಾಯ, ಕುಟುಂಬಗಳು, ತಾಯಂದಿರು ಹಾಗೂ ಮಕ್ಕಳ ಎಲ್ಲ ರೀತಿಯ ಅಗತ್ಯಗಳನ್ನೂ ನೋಡಿಕೊಳ್ಳುವುದನ್ನು ಖಚಿತಪಡಿಸುತ್ತದೆ. ಇದನ್ನು *ಮಕ್ಕಳ ಸಮಗ್ರ ಅಭಿವೃದ್ಧಿಯ ವಿಧಾನ* ಎಂದು ಕರೆಯಲಾಗುತ್ತದೆ.

### ಆರೋಗ್ಯ ಇಲಾಖೆಯೊಂದಿಗೆ ಸಂಬಂಧ

ಐಸಿಡಿಎಸ್ ಯೋಜನೆಯು ಸಂಬಂಧವಿಟ್ಟುಕೊಂಡಿರುವ ಅತೀ ಮುಖ್ಯವಾದ ಕ್ಷೇತ್ರವೆಂದರೆ ಅದು ಆರೋಗ್ಯ ಕ್ಷೇತ್ರ. ಆರೋಗ್ಯ ಸಂಬಂಧಿತ ಸೇವೆಗಳನ್ನು ಆರೋಗ್ಯ ಇಲಾಖೆಯ ಮೂಲಕ ತಲುಪಿಸಲಾಗುತ್ತವೆ.

ಐಸಿಡಿಎಸ್ ಯೋಜನೆಯೊಂದಿಗೆ ನೇರ ಸಂಬಂಧ ಹೊಂದಿರುವ ಕ್ಷೇತ್ರ ಮಟ್ಟದ ಆರೋಗ್ಯಾಧಿಕಾರಿಗಳು ಇವರು:

- ಆರೋಗ್ಯಾಧಿಕಾರಿ (MO)
- ಮಹಿಳಾ ಆರೋಗ್ಯ ವೀಕ್ಷಕರು (LHV)
- ಸಹಾಯಕ ಸೂಲಗಿತ್ತಿ ದಾದಿ (ANM)
- ತರಬೇತಿ ಪಡೆದ ಪ್ರಸೂತಿ ಸಹಾಯಕರು (TBA)

ಐಸಿಡಿಎಸ್ ಯೋಜನೆಯಿಂದ ಲಭ್ಯವಾಗುವ ಆರೋಗ್ಯ ಸೇವೆಗಳು ಲಸಿಕೆ ಹಾಕುವುದು, ಮಕ್ಕಳು ಮತ್ತು ಗರ್ಭಿಣಿಯರ ಆರೋಗ್ಯ ತಪಾಸಣೆ, ಅನಾರೋಗ್ಯದ ಸಂದರ್ಭದಲ್ಲಿ ಆರೈಕೆ, ಒಆರ್‌ಎಸ್ ಪ್ಯಾಕೆಟ್ಟುಗಳ ವಿತರಣೆ, ಕುಟುಂಬ ಯೋಜನೆ ಇತ್ಯಾದಿಗಳನ್ನು ಒಳಗೊಂಡಿರುತ್ತವೆ. ಆರೋಗ್ಯ ಕಾರ್ಯಕರ್ತರು ಐಸಿಡಿಎಸ್ ಸಿಬ್ಬಂದಿಯ ಸಹಕಾರದೊಂದಿಗೆ ಈ ಸೇವೆಗಳನ್ನು ಒದಗಿಸುತ್ತಾರೆ; ಅಂಗನವಾಡಿಗಳಲ್ಲಿ ಈ ಸೇವೆಗಳನ್ನು ನೀಡುವುದಕ್ಕೆ ವ್ಯವಸ್ಥೆ ಮಾಡುವುದರ ಮೂಲಕ ಆರೋಗ್ಯಾಧಿಕಾರಿಗಳಿಗೆ ಸಿಬ್ಬಂದಿಯು ಬೆಂಬಲ ನೀಡುತ್ತಾರೆ.

**ಆರೋಗ್ಯ ಸೇವೆಗಳ ಜಾಲಬಂಧ**
**ಐಸಿಡಿಎಸ್‌ನೊಂದಿಗೆ ಸಂಬಂಧ**

**ಪ್ರಾಥಮಿಕ ಆರೋಗ್ಯ ಕೇಂದ್ರ**
ಆರೋಗ್ಯಾಧಿಕಾರಿಗಳು -------------------------- ಸಿಡಿಪಿಒ

**ಉಪ-ಕೇಂದ್ರಗಳು**

ಮಹಿಳಾ ಆರೋಗ್ಯ ವೀಕ್ಷಕರು (LHV) ----------- ಮೇಲುಸ್ತುವಾರಿ ಅಧಿಕಾರಿಗಳು

ಸಹಾಯಕ ಸೂಲಗಿತ್ತಿ ದಾದಿ (ANM) ------------------ ಅಂಗನವಾಡಿ ಕಾರ್ಯಕರ್ತೆ

ತರಬೇತಿ ಪಡೆದ ಪ್ರಸೂತಿ ಸಹಾಯಕರು (TBA) ----- ಸಹಾಯಕಿ

ಸಿ[...] ಕನಿಷ್ಠ ಒ[...]ಬದಿಯ ಕಾ[...]ಗಳನ್ನು ಯೋಜಿಸಿಕೊಳ್ಳಲು ಅನುಕೂಲವಾಗುವಂತೆ ಕಾರ್ಯಕರ್ತೆಯರೊಂದಿಗೆ ಜಂಟಿ ಸಭೆಗಳನ್ನು ನಡೆಸುತ್ತಾರೆ.

ಮೇಲುಸ್ತುವಾರಿ ಅಧಿಕಾರಿಗಳು ಮತ್ತು ಮಹಿಳಾ ಆರೋಗ್ಯ ವೀಕ್ಷಕರು ಕೂಡಾ ಸಮುದಾಯದವರ ಸಮಸ್ಯೆಗಳನ್ನು ತಿಳಿದುಕೊಳ್ಳಲು ಮತ್ತು ಅಗತ್ಯವಾದ ಸೇವೆಗಳನ್ನು ಒದಗಿಸಲು ಅವರನ್ನು ಜಂಟಿಯಾಗಿ ಭೇಟಿ ಮಾಡಲು ಯೋಜನೆ ಮಾಡುತ್ತಾರೆ.

ಲಸಿಕೆ ಹಾಕುವ ಸಂದರ್ಭದಲ್ಲಿ, ಅನಾರೋಗ್ಯದಿಂದ ಬಳಲುತ್ತಿರುವ ತಾಯಂದಿರು ಮತ್ತು ಮಕ್ಕಳ ಮನೆಗಳಿಗೆ ಭೇಟಿ ನೀಡುವಾಗ ಅಂಗನವಾಡಿ ಕಾರ್ಯಕರ್ತೆಯು ANM ಗೆ ಸಹಾಯ ಮಾಡುತ್ತಾಳೆ. ಮಕ್ಕಳ ತೂಕ ಮಾಡಿಸಿ, ಲಸಿಕೆ ಹಾಕಿಸಿ ಎಂದು ತಾಯಂದಿರ ಮನವೊಲಿಸಲು, ಅಥವಾ ಮಕ್ಕಳಿಗೆ ಭೇದಿ ಆದಾಗ ಮನೆಯಲ್ಲಿ ಹೇಗೆ ಆರೈಕೆ ಮಾಡಬೇಕು ಎಂಬುದನ್ನು ಹೇಳಿಕೊಡಲು ANM ರವರು ಕಾರ್ಯಕರ್ತೆಗೆ ಸಹಾಯ ಮಾಡಬಹುದು.

ಸಹಾಯಕಿಯು ತರಬೇತಿ ಪಡೆದ ಪ್ರಸೂತಿ ಸಹಾಯಕರೊಂದಿಗೆ ಅಂತರಕ್ರಿಯೆಯಿಸುತ್ತಾರೆ ಮತ್ತು ಆರೈಕೆಯ ಅಗತ್ಯವಿರುವ ತಾಯಂದಿರ ಮನೆಗಳಿಗೆ ಭೇಟಿ ನೀಡುತ್ತಾಳೆ. ಮಕ್ಕಳ ಜನನ ದಿನಾಂಕವನ್ನು ದಾಖಲಿಸಲು, ನವಜಾತ ಶಿಶುವಿನ ತೂಕವನ್ನು ತೆಗೆದುಕೊಳ್ಳಲು, ಬೆಳವಣಿಗೆಯ ನಕ್ಷೆಯನ್ನು ತುಂಬಲು, ಹೆರಿಗೆಯ ನಂತರದ ಕೊಲೊಸ್ಟ್ರಮ್ (colostrum) ಅನ್ನು ಶಿಶುವಿಗೆ ಉಣಿಸುವುದರ

ಪ್ರಯೋಜನವನ್ನು ತಾಯಂದಿರಿಗೆ ಅರಿವು ಮಾಡಿಕೊಡಲು ಮತ್ತು ಅಂತಹ ಇನ್ನೂ ಕೆಲವು ಕೆಲಸಗಳಿಗೆ ಕಾಯಕರ್ತೆಯೂ ಸಹ ತರಬೇತಿ ಪಡೆದ ಪ್ರಸೂತಿ ಸಹಾಯಕರ ಸಹಾಯವನ್ನು ಪಡೆಯುತ್ತಾರೆ.

ತಮ್ಮ ಕ್ಷೇತ್ರದ ಪರಿಸರ ನೈರ್ಮಲ್ಯವನ್ನು ಖಚಿತಪಡಿಸುವಲ್ಲಿಯೂ ಐಸಿಡಿಎಸ್ ಸಿಬ್ಬಂದಿ ಮತ್ತು ಆರೋಗ್ಯ ಇಲಾಖೆಗಳ ಸಿಬ್ಬಂದಿ ಒಟ್ಟಾಗಿ ಕೆಲಸ ಮಾಡುತ್ತಾರೆ.

**ಇತರ ಕ್ಷೇತ್ರಗಳೊಂದಿಗೆ ಸಂಬಂಧ**

ಐಸಿಡಿಎಸ್ ಯೋಜನೆಯು ಸಂಬಂಧ ಹೊಂದಿರುವ ಇತರ ಕ್ಷೇತ್ರಗಳೆಂದರೆ:

- **ಗ್ರಾಮೀಣ ಅಭಿವೃದ್ಧಿ**
  ಗ್ರಾಮೀಣ ಅಭಿವೃದ್ಧಿ ಇಲಾಖೆಯ ಆದ್ಯತೆಯಾಗಿರುವ ಗ್ರಾಮೀಣ ಅಭಿವೃದ್ಧಿ ಯೋಜನೆಗಳನ್ನು ಕ್ಷೇತ್ರ ಮಟ್ಟದಲ್ಲಿ ಬಿಡಿಒ (Block Development Officer) ಗಳು ನಿರ್ವಹಿಸುತ್ತಾರೆ. ಸಿಡಿಪಿಒ ರವರಿಗೆ ಆಡಳಿತ ಸಂಬಂಧಿ ಕೆಲಸಗಳಿಗೆಂದು ಒಂದು ಕಛೇರಿಯ ವ್ಯವಸ್ಥೆಯನ್ನು ಮಾಡುವುದು, ಗ್ರಾಮಗಳಲ್ಲಿ ಅಂಗನವಾಡಿ ಕೇಂದ್ರಗಳಿಗೆ ಜಾಗವನ್ನು ಹುಡುಕಲು ಸಹಾಯ ಮಾಡುವುದು ಮತ್ತು ಕೇಂದ್ರಕ್ಕೆ ಕಟ್ಟಡವನ್ನು ಕಟ್ಟಲು ಸಮುದಾಯಕ್ಕೆ ಸಾಧ್ಯವಾಗದಿದ್ದಲ್ಲಿ ಜವಾಹರ್ ರೋಜಗಾರ್ ಯೋಜನೆಯ ನಿಧಿಯಿಂದ ಅಂಗನವಾಡಿ ಕೇಂದ್ರಗಳ ಕಟ್ಟಡ ನಿರ್ಮಾಣಕ್ಕೆ ಹಣ ಒದಗಿಸುವುದು ಇವೆಲ್ಲ ಬಿಡಿಒ ರವರ ಹೊಣೆಯಾಗಿರುತ್ತದೆ. ಐಸಿಡಿಎಸ್ ಯೋಜನಾ ಕ್ಷೇತ್ರದಲ್ಲಿ ಇರುವ ಇತರ ಸ್ವಯಂ ಸೇವಾ ಸಂಸ್ಥೆಗಳನ್ನು ಅದರ ಯೋಜನೆಯಲ್ಲಿ ತೊಡಗಿಸಿಕೊಳ್ಳಲು ಮತ್ತು ಮಹಿಳಾ ಮಂಡಲ್‌ಗಳನ್ನು ಬಲಗೊಳಿಸಲು ಸಹ ಬಿಡಿಒ ಸಹಾಯ ಮಾಡುತ್ತಾರೆ. ಬಿಡಿಒ ಗ್ರಾಮದಲ್ಲಿ ಸ್ವಚ್ಛ ನೀರಿನ ಸೌಕರ್ಯವನ್ನು ಕಲ್ಪಿಸಲು ಕೈ ಪಂಪುಗಳನ್ನು, ಸಾಧ್ಯವಾದ ಮಟ್ಟಿಗೆ ಅಂಗನವಾಡಿಯ ಕೇಂದ್ರದ ಬಳಿ ಹಾಕಿಸುತ್ತಾರೆ. ಗ್ರಾಮಗಳಿಗೆ ರಸ್ತೆ ಸೌಕರ್ಯ, ಸ್ವಚ್ಛ ಶೌಚಾಲಯ ಮತ್ತು ಹೊಗೆ ಇರದ ಒಲೆಗಳನ್ನು ಪ್ರೋತ್ಸಾಹಿಸುವುದು ಸಹ ಅವರ ಹೊಣೆಯಾಗಿರುತ್ತದೆ. DWCRA (Development of Women and Children in the Rural Areas - ಗ್ರಾಮೀಣ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ) ಯೋಜನೆಯ ಅಡಿಯಲ್ಲಿ ಮಹಿಳೆಯರು ಹೆಚ್ಚು ಹಣವನ್ನು ದುಡಿದು ತಮ್ಮ ಜೀವನ ಮಟ್ಟವನ್ನು ಸುಧಾರಿಸಿಕೊಳ್ಳುವ ಸಲುವಾಗಿ ಮಹಿಳೆಯರಿಗೆ ಆದಾಯೋತ್ಪನ್ನ ಯೋಜನೆಗಳನ್ನೂ ಸಹ ಬಿಡಿಒ ಶುರು ಮಾಡಬೇಕು. ಗ್ರಾಮೀಣ ಅಭಿವೃದ್ಧಿ ಯೋಜನೆಗಳ ಅಡಿಯಲ್ಲಿ ಒದಗಿಸಲಾಗುವ ಸೇವೆಗಳು ಮತ್ತು ಐಸಿಡಿಎಸ್ ಯೋಜನೆಯ ಸೇವೆಗಳನ್ನು ಒಟ್ಟಾಗಿ ಪರಸ್ಪರ ಸಹಕಾರದ ಮೂಲಕ ಜನರಿಗೆ ಒದಗಿಸುವ ಎಲ್ಲ ಪ್ರಯತ್ನಗಳನ್ನೂ ಮಾಡಲಾಗುತ್ತದೆ.

- **ಶಿಕ್ಷಣ**
  ಅದರ ವಯಸ್ಕರ ಶಿಕ್ಷಣ ಯೋಜನೆಗಳ ಮೂಲಕ ಐಸಿಡಿಎಸ್ ಯೋಜನೆಯ ಸೇವೆಗಳನ್ನು ಪಡೆಯುವ ವಯಸ್ಕ ಮಹಿಳೆಯರಿಗೆ ಶಿಕ್ಷಣ ಒದಗಿಸುವಲ್ಲಿ

ಶಿಕ್ಷಣ ಇಲಾಖೆಯು ನೆರವಾಗುತ್ತದೆ. ಅಂಗನವಾಡಿಯಿಂದ ಹೊರಬಿದ್ದ ಎಲ್ಲಾ ಮಕ್ಕಳು ಶಾಲೆಗೆ ಪ್ರವೇಶ ಪಡೆಯಬೇಕೆಂಬ




**ಚಿತ್ರ 19.4: ಐಸಿಡಿಎಸ್ ಯೋಜನೆಯು ಇನ್ನೂ ಹೆಚ್ಚು ಪರಿಣಾಮಕಾರಿಯಾಗಿಸಲು ಅಂತರ್‌ವಿಭಾಗೀಯ ವಿಧಾನವನ್ನು ಅಳವಡಿಸಿಕೊಳ್ಳಲಾಗುತ್ತದೆ.**

ಉದ್ದೇಶದಿಂದ ಅಂಗನವಾಡಿ ಕೇಂದ್ರಗಳನ್ನು ಗ್ರಾಮದ ಪ್ರಾಥಮಿಕ ಶಾಲೆಗಳೊಂದಿಗೆ ತಳಕುಹಾಕಲಾಗುತ್ತದೆ. ಪ್ರಾಥಮಿಕ ಶಾಲೆಯ ಶಿಕ್ಷಕ ಶಿಕ್ಷಕಿಯರೂ ಮಕ್ಕಳಿಗೆ ವಿವಿಧ ಬಗೆಯ ಚಟುವಟಿಕೆಗಳನ್ನು ಆಯೋಜಿಸುವಲ್ಲಿಯೂ ಸಹ ಅಂಗನವಾಡಿ ಕಾರ್ಯಕರ್ತೆಗೆ ಸಹಾಯ ಮಾಡಬೇಕು.

ಈ ಎಲ್ಲಾ ಒಟ್ಟು ಸೇವೆಗಳು ಮಕ್ಕಳು ಮತ್ತು ಕುಟುಂಬಗಳು ತಮ್ಮ ಅಗತ್ಯತೆಗಳನ್ನು ತಾವೇ ಸ್ವತಃ ಪೂರೈಸಿಕೊಳ್ಳಲು ಸಶಕ್ತರಾಗುವಂತಹ ರೀತಿಯಲ್ಲಿ ಅವರ ಬೆಳವಣಿಗೆಯನ್ನು ಬೆಂಬಲಿಸುತ್ತದೆ.

## 19.13 ಐಸಿಡಿಎಸ್ ಯೋಜನೆಯನ್ನು ಬಲಪಡಿಸುವುದು

ಐಸಿಡಿಎಸ್ ಯೋಜನೆಯು ಈಗ ವಿಶ್ವ ಬ್ಯಾಂಕಿನ ಸಹಾಯದೊಂದಿಗೆ ಮತ್ತಷ್ಟು ಬಲಗೊಳ್ಳುತ್ತಿದೆ. ಈ ನಿಟ್ಟಿನಲ್ಲಿ ತರಲಾಗುತ್ತಿರುವ ಬದಲಾವಣೆಗಳು ಹೀಗಿವೆ:

- **ಹದಿಹರೆಯದ ಹೆಣ್ಣುಮಕ್ಕಳನ್ನು ಒಳಗೊಳ್ಳಲಾಗುವುದು**
  ಇಲ್ಲಿಯ ತನಕ ಹರೆಯದ ಹೆಣ್ಣುಮಕ್ಕಳಿಗೆ ಸರ್ಕಾರದಿಂದ ಯಾವ ಯೋಜನೆಗಳ ಸೇವೆಗಳೂ ಲಭ್ಯವಾಗುತ್ತಿರಲಿಲ್ಲ. ಆರು ವರ್ಷಕ್ಕಿಂತ ಕಡಮೆ ಇರುವ ಮಕ್ಕಳು, ಗರ್ಭಿಣಿಯರು ಮತ್ತು ಬಾಣಂತಿಯರನ್ನು ಐಸಿಡಿಎಸ್ ಯೋಜನೆಯು ನೋಡಿಕೊಳ್ಳುತ್ತದೆ; ಆರಕ್ಕಿಂತ ಹೆಚ್ಚಿನವರನ್ನು ಶಾಲಾ ಶಿಕ್ಷಣ ವ್ಯವಸ್ಥೆಯು ನೋಡಿಕೊಳ್ಳುತ್ತದೆ. ಆದರೆ ಶಾಲಾ ವ್ಯವಸ್ಥೆಯೊಳಗೆ ಇರದಿರುವ ಹರೆಯದ ಹೆಣ್ಣುಮಕ್ಕಳು ಅನೇಕವೇಳೆ ಸೇವೆಗಳಿಂದ ವಂಚಿತರಾಗುತ್ತಾರೆ. ಅವರಿಗೆ ಸರಿಯಾದ ಪೌಷ್ಟಿಕ ಆಹಾರ ಸಿಗದೇ ಇರುವ ಕಾರಣ ಅವರ

ಆರೋಗ್ಯ ಸ್ಥಿತಿಯು ಕಳಪೆ ಮಟ್ಟದ್ದಾಗಿರುತ್ತದೆ. ಈಗಿನ ಐಸಿಡಿಎಸ್ ಯೋಜನೆಯ ಅಡಿಯಲ್ಲಿ ಹರೆಯದ ಹೆಣ್ಣುಮಕ್ಕಳನ್ನೂ ಸಹ ಅಂಗನವಾಡಿ ಕೇಂದ್ರದಲ್ಲಿ ದಾಖಲಿಸಿಕೊಳ್ಳಲಾಗುತ್ತಿದೆ ಮತ್ತು ಅವರಿಗೂ ಪೂರಕ ಪೌಷ್ಟಿಕ ಆಹಾರ ಮತ್ತು ಆರೋಗ್ಯ ಸೇವೆಗಳು ನೀಡಲಾಗುತ್ತಿವೆ. ಅವರು ಅದಕ್ಕೆ ಪ್ರತಿಯಾಗಿ ಅಂಗನವಾಡಿ ಕಾರ್ಯಕರ್ತೆಯ ಕೆಲಸದಲ್ಲಿ ಸಹಾಯ ಮಾಡುತ್ತಾರೆ. ಹಾಗೆ ಸಹಾಯ ಮಾಡುವಾಗ ಅವರು ಮಕ್ಕಳನ್ನು ಸರಿಯಾದ ರೀತಿಯಲ್ಲಿ ಆರೈಕೆ ಮಾಡುವದನ್ನು ಕಲಿತುಕೊಳ್ಳುತ್ತಾರೆ.

- **ಮಹಿಳೆಯರಿಗೆ ಸಮಗ್ರ ಕಲಿಕೆ (WILL)**
  ಈ ಯೋಜನೆ ಅಡಿಯಲ್ಲಿ ಮಹಿಳೆಯರಿಗೆ ಮೂಲ ಓದು, ಬರೆಹ ಮತ್ತು ಸಂಖ್ಯಾ ಕೌಶಲ್ಯಗಳನ್ನು ಕಲಿಯಲು ಅವಕಾಶಗಳನ್ನು ಒದಗಿಸಲಾಗುತ್ತಿದೆ. ಜೊತೆಗೆ ತಮ್ಮ ಆರೋಗ್ಯ, ಪೌಷ್ಟಿಕತೆ ಮತ್ತು ಶೈಕ್ಷಣಿಕ ಅಗತ್ಯಗಳನ್ನು ಹೇಗೆ ಪೂರೈಸಿಕೊಳ್ಳುವುದು ಎಂಬುದರ ಅರಿವನ್ನೂ ಸಹ ಅವರಿಗೆ ನೀಡಲಾಗುತ್ತಿದೆ. ಸರ್ಕಾರದ ವಯಸ್ಕರ ಶಿಕ್ಷಣ ಯೋಜನೆಯ ಅಡಿಯಲ್ಲಿ ಸುಶಿಕ್ಷಿತ ಕಾರ್ಯಕರ್ತೆಯರಿಗೆ ಈ ಮಹಿಳೆಯರ ಶಿಕ್ಷಣದ ಜವಾಬ್ದಾರಿಯನ್ನು ನೀಡಲಾಗಿದೆ.

- **ಆದಾಯೋತ್ಪನ್ನ ಚಟುವಟಿಕೆಗಳಿಗೆಂದು ಮಹಿಳಾ ಮಂಡಲ್ ಗಳನ್ನು ಬಲಪಡಿಸುವುದು**
  ಪ್ರತೀ ಗ್ರಾಮದಲ್ಲಿ ರೂಪಿತಗೊಂಡ ಮಹಿಳಾ ಮಂಡಲ್‌ಗಳಿಗೆ ಪ್ರಾರಂಭದಲ್ಲಿ ೧೦೦೦ ರುಪಾಯಿಗಳಷ್ಟು ಚಿಕ್ಕ ಮೊತ್ತದ ಮೂಲಕ ಆದಾಯೋತ್ಪನ್ನ ಚಟುವಟಿಕೆಗಳನ್ನು ಪ್ರಾರಂಭಿಸಲು ಬೆಂಬಲ ನೀಡಲಾಗುತ್ತಿದೆ. ಮಹಿಳೆಯರು ಕೈಗೊಳ್ಳಬಹುದಾದ ಚಟುವಟಿಕೆಗಳನ್ನು ಆಯ್ಕೆ ಮಾಡಲು ಮತ್ತು ಒಳ್ಳೆಯ ಗುಣಮಟ್ಟದ ಉತ್ಪನ್ನಗಳನ್ನು ತಯಾರಿಸಲು ಹಾಗೂ ಅವುಗಳ ಮಾರಾಟಕ್ಕೆ ಸಂಪರ್ಕಗಳನ್ನು ಬೆಳೆಸಿಕೊಳ್ಳಲು ಸಿಡಿಪಿಓ ಸಹಾಯ ಮಾಡುತ್ತಾರೆ. ಈ ಚಟುವಟಿಕೆಗಳನ್ನು ಪ್ರಾರಂಭಿಸಿ ನಡೆಸುವಲ್ಲಿ ಯಶಸ್ವಿಯಾದ ಮಹಿಳಾ ಮಂಡಲ್ ಗಳಿಗೆ ತಮ್ಮ ಆದಾಯೋತ್ಪನ್ನ ಚಟುವಟಿಕೆಗಳನ್ನು ವಿಸ್ತರಿಸಿಕೊಳ್ಳಲು ಹೆಚ್ಚಿನ ಹಣ ಸಹಾಯ ನೀಡುವುದರ ಮೂಲಕ ಬೆಂಬಲ ನೀಡಲಾಗುತ್ತಿದೆ.

## 19.14 ಐಸಿಡಿಎಸ್ ಯೋಜನೆಯ ಮೌಲ್ಯಮಾಪನ

ಐಸಿಡಿಎಸ್ ಯೋಜನೆಯು ಒಂದು ರಾಷ್ಟ್ರವ್ಯಾಪಿ ಯೋಜನೆಯಾಗಿದೆ. ಇವತ್ತು ರಾಷ್ಟ್ರದಾದ್ಯಂತ ೩೦೦೦ಕ್ಕಿಂತಲೂ ಹೆಚ್ಚಿನ ಐಸಿಡಿಎಸ್ ಯೋಜನೆಗಳಿವೆ ಎಂದು ನಾವು ಹೇಳಿದ್ದು ನಿಮಗೆ ನೆನಪಿರಬಹುದು.

**ಪರಿಣಾಮ**

ಐಸಿಡಿಎಸ್ ಯೋಜನೆಯು ಮಕ್ಕಳ ಆರೋಗ್ಯ, ಪೌಷ್ಟಿಕತೆ ಮತ್ತು ಶೈಕ್ಷಣಿಕ ಸ್ಥಿತಿಯನ್ನು ಸುಧಾರಿಸಿದೆ. ಐಸಿಡಿಎಸ್ ಯೋಜನೆಯು ಇರುವ ಕ್ಷೇತ್ರಗಳಲ್ಲಿ ಲಸಿಕೆ ಹಾಕಿಕೊಂಡಿರುವ ಸಂಖ್ಯೆ ಹೆಚ್ಚಾಗಿದೆ, ಅಪೌಷ್ಟಿಕತೆ ಮತ್ತು ಅನಾರೋಗ್ಯದಿಂದ ಬಳಲುವ ಮಕ್ಕಳ ಪ್ರಮಾಣ ಕಡಮೆ ಆಗಿದೆ, ಶಿಶುಗಳ ಮರಣದ ಪ್ರಮಾಣ ಕಡಮೆ ಆಗಿದೆ ಮತ್ತು ಅಂಗನವಾಡಿಯ ಅನುಭವ ಪಡೆದುಕೊಂಡು ಹೆಚ್ಚು ಹೆಚ್ಚು ಮಕ್ಕಳು ಶಾಲೆಗಳಿಗೆ ಹೋಗುತ್ತಿದ್ದಾರೆ.

**ಕೆಲವು ಸಮಸ್ಯೆಗಳು**

ಅನೇಕ ಕ್ಷೇತ್ರಗಳಲ್ಲಿ ಐಸಿಡಿಎಸ್ ಯೋಜನೆಯನ್ನು ಸಮರ್ಪಕವಾಗಿ ಅನುಷ್ಠಾನ ಮಾಡಿಲ್ಲ, ಆದ್ದರಿಂದ ಅಲ್ಲಿ ನಿರೀಕ್ಷಿತ ಫಲಿತಾಂಶಗಳು ಕಂಡುಬಂದಿಲ್ಲ. ಐಸಿಡಿಎಸ್ ಯೋಜನೆಯನ್ನು ಅನುಷ್ಠಾನಕ್ಕೆ ತರುವಲ್ಲಿ ಎದುರಿಸುವ ಕೆಲವು ಸಮಸ್ಯೆಗಳನ್ನು ನೋಡೋಣ.

- **ಇದು ಸರ್ಕಾರಿ ಯೋಜನೆ ಎಂಬಂತೆ ಜನ ನೋಡುತ್ತಾರೆ**

  ಐಸಿಡಿಎಸ್ ಯೋಜನೆಯಲ್ಲಿ ಸಮುದಾಯದ ಪಾಲ್ಗೊಳ್ಳುವಿಕೆ ಬಹಳ ಮುಖ್ಯ ಎಂಬುದರ ಹೊರತಾಗಿಯೂ ಜನರು ಹಾಗೆ ಭಾವಿಸುತ್ತಿಲ್ಲ ಎಂದು ತೋರುತ್ತದೆ. ಹೆಚ್ಚಿನ ಜನರು ಇದು ಒಂದು ಸರ್ಕಾರಿ ಯೋಜನೆ ಎಂದು ಯೋಚಿಸುತ್ತಾರೆ ಮತ್ತು ಕಾರ್ಯಕರ್ತೆಗೆ ಯಾವ ಸಹಾಯವನ್ನೂ ನೀಡಲು ಬಯಸುವುದಿಲ್ಲ. ಇದಕ್ಕೆ ಕಾರಣವೇನೆಂದರೆ ಈ ಯೋಜನೆಗಳು ಆರಂಭಗೊಳ್ಳುವುದಕ್ಕಿಂತ ಮೊದಲು ಸೇವೆಗಳನ್ನು ಪಡೆಯಲು ಜನರನ್ನು ತಯಾರು ಮಾಡಿರುವುದಿಲ್ಲ. ಸಿಡಿಪಿಒ ಮತ್ತು ಇತರರು ಕೈಗೊಳ್ಳುವ ನಿರ್ಧಾರಗಳಲ್ಲಿ ಅವರನ್ನು ಭಾಗಿಯಾಗಿಸುವುದಿಲ್ಲ. ಆದ್ದರಿಂದ, ಅವರು ತಮ್ಮನ್ನು ಕಡೆಗಣಿಸಲಾಗಿದೆ ಎಂದುಕೊಳ್ಳುತ್ತಾರೆ. ಕಾರ್ಯಕರ್ತೆಯನ್ನು ತಮ್ಮ ಸಮುದಾಯದ ಹೊರಗಿನವರು ಎಂಬಂತೆ, ಆಕೆ ಸರ್ಕಾರದ ನೌಕರಳು ಎಂಬಂತೆ ನೋಡಲು ಶುರು ಮಾಡುತ್ತಾರೆ, ಹೀಗಾಗಿ ಆಕೆಯೇ ಎಲ್ಲಾ ಕೆಲಸ ಮಾಡಬೇಕು ಎಂದು ನಿರೀಕ್ಷಿಸುತ್ತಾರೆ. ಜನರ ಪಾಲ್ಗೊಳ್ಳುವಿಕೆಯು ಇರುವುದೇ ಇಲ್ಲ. ಇತ್ತ ಕಾರ್ಯಕರ್ತೆಯೂ ಜನರು ತನ್ನ ಕೆಲಸಗಳಲ್ಲಿ ಮೂಗು ತೂರಿಸುವುದನ್ನು ಇಷ್ಟ ಪಡುವುದಿಲ್ಲ, ಆದ್ದರಿಂದ ಸಹಾಯ ಕೇಳುವುದರಿಂದ ತಪ್ಪಿಸಿಕೊಳ್ಳುತ್ತಾರೆ. ಇದರ ಪರಿಣಾಮ ಏನೆಂದರೆ ಜನರ ಸಲುವಾಗಿಯೇ ಇರುವ ಈ ಯೋಜನೆಯು ಅವರು ಯೋಚಿಸುವ ಮತ್ತು ಕೆಲಸ ಮಾಡುವ ಬಗೆಯಲ್ಲಿ ಯಾವುದೇ ಶಾಶ್ವತವಾದಂತಹ ಬದಲಾವಣೆಯನ್ನು ತರಲು ಸಹಾಯಮಾಡುವುದಿಲ್ಲ. ಜನರ ಬದುಕಿನ ಕ್ರಮ, ಅವರ ಆರೋಗ್ಯ ಮತ್ತು ಪೌಷ್ಟಿಕತೆಯಲ್ಲಿ ಉತ್ತಮ ಸುಧಾರಣೆಯನ್ನು ಮತ್ತು ಮಕ್ಕಳ ಮಾನಸಿಕ ಬೆಳವಣಿಗೆಯನ್ನು ಬೆಂಬಲಿಸಬೇಕಾದ ಯೋಜನೆಯೊಂದು ಏನೂ ಪರಿಣಾಮ ಬೀರದೆ ಹೋಗುತ್ತದೆ.

- **ಬೇರೆ ಬೇರೆ ಇಲಾಖೆಗಳು ಒದಗಿಸುವ ವಿವಿಧ ಸೇವೆಗಳ ನಡುವೆ ಸಂಯೋಜನೆಯ ಕೊರತೆ**

  ಆರೋಗ್ಯ, ಗ್ರಾಮೀಣ ಅಭಿವೃದ್ಧಿ ಮತ್ತು ಶಿಕ್ಷಣ ಇಲಾಖೆಗಳು ಜೊತೆಗೂಡಿ ಕೆಲಸ ಮಾಡಬೇಕು ಎಂದಿದ್ದರೂ ಸಹ ಅದು ಕೆಲವೊಮ್ಮೆ ಸಾಧ್ಯವಾಗುವುದಿಲ್ಲ. ಪ್ರತೀ ಇಲಾಖೆಯೂ ಸ್ವತಂತ್ರವಾಗಿ ಕೆಲಸ ಮಾಡುತ್ತದೆಯಾದ್ದರಿಂದ ಸೇವೆಗಳು ಪರಿಣಾಮ ಬೀರುವಲ್ಲಿ ವಿಫಲವಾಗುತ್ತವೆ. ಉದಾಹರಣೆಗೆ, ಆರೋಗ್ಯ ಇಲಾಖೆಯ ಅಧಿಕಾರಿಗಳು ಆರೋಗ್ಯ ತಪಾಸಣೆ ಅಥವಾ ಲಸಿಕೆಯ ಕಾರ್ಯಕ್ರಮಗಳನ್ನು ನಿಯಮಿತವಾಗಿ ಮಾಡದೇ ಇರಬಹುದು; ಜಂಟಿ ಭೇಟಿಗಳನ್ನು ಕೈಗೊಳ್ಳದೇ ಇರಬಹುದು; ಕೇಂದ್ರಕ್ಕೆ ಜಾಗದ ವ್ಯವಸ್ಥೆ, ಆದಾಯೋತ್ಪನ್ನ ಚಟುವಟಿಕೆ ಮುಂತಾದವುಗಳನ್ನು ಯೋಜಿಸಲು ಬಿಡಿಒ ರವರು ಸಿಡಿಪಿಒ ಗೆ ಸಹಾಯ ಒದಗಿಸದೇ ಇರಬಹುದು. ಇದು ಸೇವೆಗಳು ಜನರಿಗೆ ಸರಿಯಾಗಿ ತಲುಪದೇ ಇರಲು ಅಥವಾ ವಿವಿಧ ಇಲಾಖೆಗಳು ಪರಸ್ಪರರ ಕೆಲಸವನ್ನು ಪುನರಾವರ್ತಿಸಲು ಕಾರಣವಾಗುತ್ತದೆ, ಉದಾಹರಣೆಗೆ, ಸಿಡಿಪಿಒ ಮತ್ತು ಬಿಡಿಒ ಇಬ್ಬರೂ ಬೇರೆ ಬೇರೆ ಆದಾಯೋತ್ಪನ್ನ ಚಟುವಟಿಕೆಗಳನ್ನು ಉತ್ತೇಜಿಸುತ್ತಿರಬಹುದು.

- **ಅಂಗನವಾಡಿ ಕಾರ್ಯಕರ್ತೆಯರ ಶೈಕ್ಷಣಿಕ ಮಟ್ಟ ಕಡಮೆ ಇರುವುದು**

  ಹೆಚ್ಚಿನ ಕಾರ್ಯಕರ್ತೆಯರು ಬಹಳ ಮೂಲಸೌಕರ್ಯಗಳು ತಲುಪದ ದೂರದ ಹಳ್ಳಿಗಳಿಂದ ಬಂದಿರುತ್ತಾರಾದ್ದರಿಂದ ಹೆಚ್ಚಿನವರು ನಿರೀಕ್ಷಿತ ಮಟ್ಟಕ್ಕೆ ಶಿಕ್ಷಣವನ್ನು ಪಡೆದಿರುವುದಿಲ್ಲ. ಕಾರ್ಯರ್ತೆಯರು ಸ್ಥಳೀಯರೇ ಆಗಿರಬೇಕಾಗುವುದರಿಂದ ಕೆಲವೊಮ್ಮೆ ಅವರು ಸುಶಿಕ್ಷಿತರಾಗಿರದೇ ಇದ್ದರೂ ಅಥವಾ ಕಡಮೆ ಶಿಕ್ಷಣ ಹೊಂದಿದ್ದರೂ ಅವರನ್ನು ನೇಮಿಸಿಕೊಳ್ಳಲಾಗುತ್ತದೆ. ಈ ಮಹಿಳೆಯರಿಗೆ ರೆಜಿಸ್ಟರ್‌ಗಳನ್ನು ತುಂಬುವುದು ಮತ್ತು ಓದು-ಬರೆಹ ಸಾಮರ್ಥ್ಯಗಳ ಅವಶ್ಯಕತೆ ಇರುವ ಆ ಎಲ್ಲ ಚಟುವಟಿಕೆಗಳನ್ನು ಮಾಡಲು ಕಷ್ಟವಾಗುತ್ತದೆ. ತರಬೇತಿ ಕಾರ್ಯಕ್ರಮದಲ್ಲಿ ಕೂಡಾ ಕಲಿಸುತ್ತಿರುವುದನ್ನು ಅರ್ಥಮಾಡಿಕೊಂಡು ಅವರು ಕಲಿಯಬೇಕಾದದ್ದನ್ನು ಕಲಿಯಲು ಅವರಿಗೆ ಕಷ್ಟವಾಗುತ್ತದೆ. ಹೀಗಾಗಿ ಸೇವೆಗಳನ್ನು ಸಮರ್ಪಕವಾಗಿ ಒದಗಿಸಲು ಅವರಿಗೆ ಸಾಧ್ಯವಾಗದೇ ಹೋಗುತ್ತದೆ.

- **ಅಂಗನವಾಡಿ ಕಾರ್ಯಕರ್ತರ ಮತ್ತು ಇತರ ಐಸಿಡಿಎಸ್ ಅಧಿಕಾರಿಗಳಿಗೆ ಸರಿಯಾದ ಪ್ರೇರೇಪಣೆ ದೊರಕುತ್ತಿರುವುದಿಲ್ಲ**

  ಸೇವೆಗಳನ್ನು ಸಮರ್ಪಕವಾಗಿ ತಲುಪಿಸಲು ಕಾರ್ಯಕರ್ತರಿಗೆ ಸಾಕಷ್ಟು ಪ್ರೇರೇಪಣೆ ಇರುವುದಿಲ್ಲ. ಅನೇಕವೇಳೆ ಮೇಲುಸ್ತುವಾರಿ ಅಧಿಕಾರಿಗಳು ಕೇಂದ್ರಕ್ಕೆ ನಿಯತವಾಗಿ ಭೇಟಿ ನೀಡುವುದಿಲ್ಲವಾದ್ದರಿಂದ ಕಾರ್ಯಕರ್ತೆಗೆ ತನ್ನ ಕೆಲಸಗಳನ್ನು ಉತ್ತಮವಾಗಿ ಮಾಡಬೇಕೆಂಬ ಆಸಕ್ತಿ ಇರುವುದಿಲ್ಲ.

  ಅದೇ ರೀತಿ ಮೇಲುಸ್ತುವಾರಿ ಅಧಿಕಾರಿಗಳು ದೂರವಿರುವ ಅಂಗನವಾಡಿಗಳಿಗೆ ಭೇಟಿ ನೀಡುವುದರಿಂದ ತಪ್ಪಿಸಿಕೊಳ್ಳಲು ನೋಡುತ್ತಾರೆ ಮತ್ತು ತಮ್ಮ

ಅಂಗನವಾಡಿ ಕಾರ್ಯಕರ್ತೆಯರ ಕೌಶಲ್ಯಗಳನ್ನು ಸುಧಾರಿಸಲು ಯಾವುದೇ ಪ್ರಯತ್ನ ಮಾಡುವುದಿಲ್ಲ.

ಯೋಜನೆಯ ಆಡಳಿತ ಕಾರ್ಯಗಳಲ್ಲಿಯೇ ವ್ಯಸ್ತರಾಗುವ ಸಿಡಿಪಿಓ ಅಂಗನವಾಡಿ ಕಾರ್ಯಕರ್ತೆಯರ ಕೆಲಸಗಳನ್ನು ಉಸ್ತುವಾರಿ ಮಾಡಲು ಮತ್ತು ಸಮುದಾಯದೊಂದಿಗೆ ಸಂಪರ್ಕ ಉಳಿಸಿಕೊಳ್ಳುವುದಕ್ಕೆ ಸಮಯ ಕೊಡುವುದಿಲ್ಲ.

- **ಅಂಗನವಾಡಿಗಳಿಗೆ ಹೋದರೆ ಅಲ್ಲಿನ ರೆಜಿಸ್ಟರ್ ಮತ್ತು ದಾಖಲೆಗಳನ್ನು ಪರಿಶೀಲಿಸುವುದಕ್ಕೇ ಒತ್ತು ನೀಡುವುದು**

ಮೇಲುಸ್ತುವಾರಿ ಅಧಿಕಾರಿಗಳು ಮತ್ತು ಸಿಡಿಪಿಓ ಗಳು ಅಂಗನವಾಡಿಗೆ ಭೇಟಿ ಇಟ್ಟರೆ ಅವರಿಗೆ ದಾಖಲೆಗಳನ್ನು ಪರಿಶೀಲಿಸುವದೇ ಮುಖ್ಯವಾಗಿರುತ್ತದೆ. ಅವುರು ಇನ್ಸಪೆಕ್ಟರ್ ಗಳ ಹಾಗೆ ವರ್ತಿಸುತ್ತಾರೆ. ಅನುಷ್ಠಾನದಲ್ಲಿ ಇರಬಹುದಾದ ನ್ಯೂನತೆಗಳನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ದಾಖಲೆಗಳನ್ನು ಪರಿಶೀಲಿಸಲು ಮತ್ತು ಜನರ ಅಗತ್ಯಗಳನ್ನು ಪೂರೈಸುವಂತ ಪರಿಣಾಮಕಾರಿಯ ರೀತಿಯಲ್ಲಿ ಸೇವೆಗಳನ್ನು ತಲುಪಿಸುವುದರ ಬಗ್ಗೆ ಯೋಜನೆ ಮಾಡುವ ನಿಟ್ಟಿನಲ್ಲಿ ಪ್ರಯತ್ನವನ್ನು ಮಾಡುವುದಿಲ್ಲ. ಈ ದಾಖಲೆಗಳಲ್ಲಿನ ಅಂಕಿಅಂಶಗಳನ್ನು ರಾಜ್ಯ ಮತ್ತು ಕೇಂದ್ರ ಇಲಾಖೆಗಳಿಗೆ ಕಳುಹಿಸಿಕೊಡಬೇಕಾದುದ್ದರಿಂದ ಈ ದಾಖಲೆಗಳಿಗೆ ಹೆಚ್ಚು ಗಮನಕೊಡುವುದಕ್ಕೆ ಕಾರಣವಾಗಿದೆ. ಪರಿಣಾಮವಾಗಿ ಯೋಜನೆಯ ಗುಣಮಟ್ಟವು ಕುಂಠಿತವಾಗುತ್ತದೆ.

- **ಅಂಗನವಾಡಿ ಕೇಂದ್ರಗಳಲ್ಲಿ ಸ್ಥಳಾವಕಾಶದ ಕೊರತೆ**

ಅಂಗನವಾಡಿ ಕೇಂದ್ರಗಳಿರುವ ಜಾಗಗಳು ಬಹಳ ಸಣ್ಣ ಇರುತ್ತವೆ, ಅಲ್ಲಿ 30 ಮಕ್ಕಳು ಕುಳಿತುಕೊಳ್ಳಬಹುದಾದಷ್ಟು ಮತ್ತು ಒಳಾಂಗಣ ಚಟುವಟಿಕೆಗಳನ್ನು ನಡೆಸಬಹುದಾದಷ್ಟು ಜಾಗ ಇರುವುದಿಲ್ಲ. ಅಲ್ಲದೆ, ಹೊರಾಂಗಣ ಚಟುವಟಿಕೆಗಳಿಗೂ ಒಳ್ಳೆಯ ಜಾಗ ಇರುವುದಿಲ್ಲ. ಅಂಗನವಾಡಿ ಕೇಂದ್ರಗಳಿಗೆ ಬಾಡಿಗೆ ಕೊಡುವಷ್ಟು ಹಣ ಇಲ್ಲದಿರುವುದರಿಂದ, ಮುಖ್ಯವಾಗಿ ಪಟ್ಟಣ ಮತ್ತು ನಗರಗಳಲ್ಲಿ ಮನೆಮಾಲೀಕರು ಕಡಮೆ ಬಾಡಿಗೆ ಸ್ವೀಕರಿಸಲು ನಿರಾಕರಿಸುವುದರಿಂದ ಕಾರ್ಯಕರ್ತೆಯು ಆಗ್ಗಾಗೆ ತನ್ನ ಕೇಂದ್ರವನ್ನು ನಡೆಸಲು ಹೊಸ ಜಾಗವನ್ನು ಹುಡುಕಬೇಕಾಗುತ್ತದೆ. ಹೆಚ್ಚಿನ ಕೇಂದ್ರಗಳನ್ನು ಕಾರ್ಯರ್ತೆಯರು ಮತ್ತು ಅವರ ಸಹಾಯಕರ ಮನೆಗಳಲ್ಲಿಯೇ ನಡೆಸುತ್ತಿರುತ್ತಾರೆ. ಹೀಗಾದಾಗ ಅಂಗನವಾಡಿಯ ಕೇಂದ್ರವು ರಾತ್ರಿಯಲ್ಲಿ ಮಲಗುವ ಕೋಣೆಯಾಗಿರುತ್ತದೆ, ಆಗ ನಿತ್ಯವೂ ಅಂಗನವಾಡಿಯ ಸಾಮಾನುಗಳನ್ನು ಎತ್ತಿಟ್ಟು ಮರುದಿನ ಒಳಗಿಟ್ಟು ಹೀಗೆ ಮಾಡುತ್ತ ಇರಬೇಕಾಗುತ್ತದೆ. ಕೆಲವೆಡೆ ಸರಿಯಾಗಿ ಬೆಳಕಿಲ್ಲದ ಕೋಣೆಗಳಲ್ಲಿ, ಜಗಲಿಗಳಲ್ಲಿ, ಮನೆಗಳ ಓಣಿಗಳಲ್ಲಿ, ಇನ್ನೂ ಕೆಲವೆಡೆ ಮಳೆ, ಬಿಸಿಲು, ಚಳಿಯಿಂದ ಮಕ್ಕಳನ್ನು ರಕ್ಷಿಸಲಾಗದ ಕಚ್ಚಾ ಸೂರಿನಡಿಯಲ್ಲಿ

ಕೇಂದ್ರಗಳನ್ನು ನಡೆಸಲಾಗುತ್ತದೆ. ಇವೆಲ್ಲವೂ ಅಂಗನವಾಡಿಗಳ ಕಾರ್ಯಚಟುವಟಿಕೆಗಳನ್ನು ಆಯೋಜಿಸಲು ಕಷ್ಟಸಾಧ್ಯವಾಗಿಸುತ್ತದೆ.

- **ಚಟುವಟಿಕೆಗಳನ್ನು ನಡೆಸಲು ಸಮರ್ಪಕ ಸಾಮಗ್ರಿಗಳು ಇರುವುದಿಲ್ಲ**
  ಅಂಗನವಾಡಿ ಕಾರ್ಯಕರ್ತೆಯರು ಶಾಲಾಪೂರ್ವ ಚಟುವಟಿಕೆಗಳನ್ನು ನಡೆಸಲು ಒದಗಿಸುವ ಸಾಮಗ್ರಿಗಳು ಅತ್ಯಲ್ಪವೇ ಎನ್ನಬಹುದು. ಒದಗಿಸಲಾಗುವ ಸಾಮಗ್ರಿಗಳೂ ಸ್ವಲ್ಪವೇ ಇರುತ್ತವೆ, ಬಹಳ ಕಾಲ ಬರುವಂತಹ ಸಾಮಗ್ರಿಗಳಲ್ಲ, ಬಳಸಿದಂತೆ ಮುರಿಯುತ್ತವೆ, ಹಾಳಾಗುತ್ತವೆ. ಆದ್ದರಿಂದ ಕಾರ್ಯಕರ್ತೆಯು ಸಾಮಾನುಗಳು ಹಾಳಾಗಿಬಿಡುತ್ತವೆ ಎಂದು ಅವುಗಳನ್ನು ಪೆಟ್ಟಿಯಲ್ಲೇ ಬೀಗ ಹಾಕಿ ಇಡಲು ಒಲವು ತೋರುತ್ತಾರೆ, ಮಕ್ಕಳಿಗೆ ಆಡಲು ಕೊಡುವುದಿಲ್ಲ. ಸಾದಿಲ್ವಾರು ಬಡ್ಜೆಟ್ಟಿನ ಅಡಿಯಲ್ಲಿ ಒದಗಿಸಲಾಗುವ ಸ್ವಲ್ಪವಷ್ಟೇ ಹಣವನ್ನು ಸಿಡಿಪಿಓ ರವರು ರೆಜಿಸ್ಟರ್‌ಗಳನ್ನು ಕೊಳ್ಳಲು ಅಥವಾ ಮಕ್ಕಳ ವೈಯಕ್ತಿಕ ನೈರ್ಮಲ್ಯಕ್ಕೆಂದು ಸೋಪು, ಬಕೆಟ್ ಇಂಥವುಗಳನ್ನು ಕೊಳ್ಳಲು ಬಳಸುತ್ತಾರೆ ಮತ್ತು ಬಣ್ಣಗಳು, ಕಾಗದ, ಆಟದ ಮಣ್ಣು ಇತ್ಯಾದಿಗಳನ್ನು ಕೊಳ್ಳಲು ಹಣ ಉಳಿಯುವುದಿಲ್ಲ.

  ಹೀಗೆ ಯೋಜನೆಗಳ ಅನುಷ್ಠಾನಕ್ಕೆ ಹಲವು ಸಮಸ್ಯೆಗಳಿದ್ದರೂ ಮಕ್ಕಳ ಆರೋಗ್ಯ ಮತ್ತು ಪೌಷ್ಟಿಕತೆಯ ಸ್ಥಿತಿಯನ್ನು ಸುಧಾರಿಸಲು ಅವು ಸಹಾಯ ಮಾಡಿದೆ. ಅಂಗನವಾಡಿಯ ಮಕ್ಕಳಲ್ಲಿ 3 ಮತ್ತು 4 ನೇ ಶ್ರೇಣಿಯ ಅಪೌಷ್ಟಿಕತೆ ಕಾಣಿಸಿಕೊಳ್ಳುವುದು ಕಡಮೆಯಾಗಿದೆ. ಐಸಿಡಿಎಸ್ ಯೋಜನಾ ಕ್ಷೇತ್ರಗಳಲ್ಲಿ ತಾಯಂದಿರು ಮತ್ತು ಮಕ್ಕಳ ಮರಣದ ಪ್ರಮಾಣವೂ ಕಡಮೆ ಇದೆ. ಐಸಿಡಿಎಸ್ ಅಂಗನವಾಡಿಗಳಿಂದ ಹೊರಬರುವ ಮಕ್ಕಳು ಶಾಲೆಗಳಲ್ಲಿ ದಾಖಲಾಗಿ ಅಲ್ಲಿ ಉತ್ತಮ ಸಾಧನೆ ತೋರಿಸುತ್ತಾರೆ. ಅಂಥವರು ಶಾಲೆಗಳನ್ನು ಅರ್ಧಕ್ಕೇ ಬಿಡುವುದು ಕಡಮೆ. ಇನ್ನೂ ಹೆಚ್ಚಿನ ಬದಲಾವಣೆಗಳನ್ನು ಕಾಣಲು ಜನರ ಆದಾಯ ಮತ್ತು ಶೈಕ್ಷಣಿಕ ಮಟ್ಟವನ್ನು ಹೆಚ್ಚಿಸುವ ಯೋಜನೆಗಳಲ್ಲಿ ಇನ್ನೂ ಹೆಚ್ಚಿನ ಪ್ರಯತ್ನವನ್ನು ಹಾಕಬೇಕು. ಕೊನೆಯದಾಗಿ ಆದರೆ ಕನಿಷ್ಠವಲ್ಲದೆ, ಹೆಚ್ಚು ಹೆಚ್ಚು ಜನರು ಪ್ರೇರೇಪಣೆಗೊಂಡು ಐಸಿಡಿಎಸ್ ಯೋಜನೆಯಲ್ಲಿ ತೊಡಗಿಸಿಕೊಂಡಷ್ಟೂ ಈ ಯೋಜನೆಯು ಹೆಚ್ಚು ಗಣನೀಯವಾದ ಮತ್ತು ಸುಸ್ಥಿರವಾದ ಪರಿಣಾಮಗಳನ್ನು ಬೀರುವ ಸಾಧ್ಯತೆಯಿದೆ.

## 19.15 ಸಾರಾಂಶ

ಐಸಿಡಿಎಸ್ ಯೋಜನೆಯು ದೇಶದ ಮಕ್ಕಳಿಗೆಂದಿರುವ ಒಂದು ಹೆಚ್ಚು ಸಮಗ್ರವಾದ ಆರೋಗ್ಯ, ಪೌಷ್ಟಿಕತೆ ಮತ್ತು ಶೈಕ್ಷಣಿಕ ಯೋಜನೆಯಾಗಿದೆ. ಈ ಯೋಜನೆಯ ಅಡಿಯಲ್ಲಿ 3000 ಕ್ಕಿಂತಲೂ ಹೆಚ್ಚಿನ ಯೋಜನೆಗಳಿವೆ. ಈ ಯೋಜನೆಯು ಫಲಾನುಭವಿಗಳಿಗೆ ಆರು ಸೇವೆಗಳನ್ನು ಒಳಗೊಂಡ ಒಂದು ಸಮಗ್ರವಾದ ಪ್ಯಾಕೆಜ್ ಅನ್ನು ಒದಗಿಸುತ್ತದೆ. 0-6 ವರ್ಷದೊಳಗಿನ ಮಕ್ಕಳು, ಗರ್ಭಿಣಿಯರು ಮತ್ತು

ಬಾಣಂತಿಯರು, ಆದಾಯ ಕಡಮೆ ಇರುವ ಗುಂಪುಗಳಿಂದ ಬಂದಂತಹ 15-45 ರ ಒಳಗಿನ ಮಹಿಳೆಯರು ಈ ಯೋಜನೆಯ ಫಲಾನುಭವಿಗಳಾಗಿದ್ದಾರೆ. ಇದರಲ್ಲಿ ನೀಡುವ ಸೇವೆಗಳು: ಪೂರಕ ಪೌಷ್ಠಿಕ ಆಹಾರ, ಪ್ರತಿರಕ್ಷಣೆ ಲಸಿಕೆ, ಆರೋಗ್ಯ ತಪಾಸಣೆ, ಕುರಿಯರಿಕೆ ಸೇವೆಗಳು, ಪೌಷ್ಟಿಕತೆ ಮತ್ತು ಆರೋಗ್ಯ ಶಿಕ್ಷಣ ಮತ್ತು ಅನೌಪಚಾರಿಕ ಶಾಲಾಪೂರ್ವ ಶಿಕ್ಷಣ. ಈ ಸೇವೆಗಳನ್ನು ಜನರಿಗೆ ತಲುಪಿಸುವ ಜವಾಬ್ದಾರಿಯನ್ನು ಈ ಕೆಳಗಿನ ಸಿಬ್ಬಂದಿ ವಹಿಸುತ್ತಾರೆ: ಜಿಲ್ಲಾ ಮಟ್ಟದಲ್ಲಿ ಸಿಡಿಪಿಒ, ವಲಯ ಮಟ್ಟದಲ್ಲಿ ಮೇಲುಸ್ತುವಾರಿ ಅಧಿಕಾರಿಗಳು, ಎಲ್ಲಕ್ಕಿಂತ ಮುಖ್ಯವಾಗಿ ಗ್ರಾಮ ಮಟ್ಟದಲ್ಲಿ ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿ.

ಐಸಿಡಿಎಸ್ ಯೋಜನೆಯು ಗ್ರಾಮೀಣ ಅಭಿವೃದ್ಧಿ ಇಲಾಖೆ ಮತ್ತು ಆರೋಗ್ಯ ಕ್ಷೇತ್ರಗಳಂತಹ ಸರ್ಕಾರದ ಇತರ ಯೋಜನೆಗಳ ಸಹಯೋಗದೊಂದಿಗೆ ಕೆಲಸ ಮಾಡುತ್ತದೆ. ಈ ಐಸಿಡಿಎಸ್ ಯೋಜನೆಯು ಮಕ್ಕಳು ಮತ್ತು ಮಹಿಳೆಯರ ಆರೋಗ್ಯ, ಪೌಷ್ಟಿಕತೆ ಮತ್ತು ಶೈಕ್ಷಣಿಕ ಸ್ಥಿತಿಗಳ ಮೇಲೆ ಪರಿಣಾಮ ಬೀರಿದ್ದರೂ ಅನೇಕ ಕ್ಷೇತ್ರಗಳಲ್ಲಿ ಅನುಷ್ಠಾನಗೊಳ್ಳಬೇಕಾದ ರೀತಿಯಲ್ಲಿ ಅದು ಆಗಿಲ್ಲ. ಸುಧಾರಣೆಗೆ ಅಲ್ಲಿ ಇನ್ನೂ ಸಾಕಷ್ಟು ಅವಕಾಶವಿದೆ.

## 19.16 ನಿಮ್ಮ ಪ್ರಗತಿಯನ್ನು ಪರಿಶೀಲಿಸಿಕೊಳ್ಳಿ: ಉತ್ತರಗಳು

### ನಿಮ್ಮ ಪ್ರಗತಿಯನ್ನು ಪರಿಶೀಲಿಸಿಕೊಳ್ಳಿ: ಅಭ್ಯಾಸ ಚಟುವಟಿಕೆ 1

**1.**

(i) - (c)
(ii) - (d)
(iii) - (b)
(iv) - (a)

### ನಿಮ್ಮ ಪ್ರಗತಿಯನ್ನು ಪರಿಶೀಲಿಸಿಕೊಳ್ಳಿ: ಅಭ್ಯಾಸ ಚಟುವಟಿಕೆ 2

**1.**

(iii) (v)

### ನಿಮ್ಮ ಪ್ರಗತಿಯನ್ನು ಪರಿಶೀಲಿಸಿಕೊಳ್ಳಿ: ಅಭ್ಯಾಸ ಚಟುವಟಿಕೆ 3

**1.**

i. ಪೂರಕ ಪೌಷ್ಟಿಕ ಆಹಾರ ಮತ್ತು ಪಾಲಕರ, ಅದರಲ್ಲೂ ಮುಖ್ಯವಾಗಿ ತಾಯಂದಿರಿಗೆ ಈ ಕುರಿತು ತಿಳುವಳಿಕೆ ನೀಡುವ ಮೂಲಕ ಅಪೌಷ್ಟಿಕತೆಯಿಂದ ಬಳಲುವ ಮಕ್ಕಳ ಪೌಷ್ಟಿಕತೆಯ ಮಟ್ಟವನ್ನು ಸುಧಾರಿಸುವುದು.

ii. ಎಲ್ಲಾ ಮಕ್ಕಳಿಗೆ ಸಮಯಕ್ಕೆ ಸರಿಯಾಗಿ ಲಸಿಕೆ ಹಾಕಿಸುವುದು.

iii. ಎಲ್ಲಾ ಹೆರಿಗೆಗಳನ್ನೂ ತರಬೇತಿ ಪಡೆದ ಆರೋಗ್ಯ ಕಾರ್ಯಕರ್ತರಿಂದಲೇ ಮಾಡಿಸುವುದು. ಅದರ ಮೊದಲ ಹೆಜ್ಜೆಯಾಗಿ ಸ್ಥಳೀಯ ದಾದಿಯರಿಗೆ ತರಬೇತಿ ನೀಡುವುದು.

iv. ತಾಯಂದಿರ ಸಮಯಕ್ಕೆ ಹೊಂದಿಕೊಳ್ಳುವ ಹಾಗೆ ಅಂಗನವಾಡಿಯ ಸಮಯವನ್ನು ಬದಲಾಯಿಸುವುದು; ತಮ್ಮ ಮಕ್ಕಳನ್ನು ಅಂಗನವಾಡಿಗೆ ಕಳುಹಿಸುವಂತೆ ಅವರಿಗೆ ಉತ್ತೇಜನ ನೀಡುವುದು.

v. ತಮ್ಮ ಹೆಣ್ಣುಮಕ್ಕಳನ್ನು ಶಾಲೆಗೆ ಕಳುಹಿಸುವಂತೆ ಪಾಲಕರ ಮನವೊಲಿಸುವುದು.

**ನಿಮ್ಮ ಪ್ರಗತಿಯನ್ನು ಪರಿಶೀಲಿಸಿಕೊಳ್ಳಿ: ಅಭ್ಯಾಸ ಚಟುವಟಿಕೆ 4**

**1.**

(i) - (c)
(ii) - (e)
(iii) - (a)

**ಅನುವಾದಕರು:** **/ ಪರಿಶೀಲಕರು:**

**ಮೂಲ:**